**ಉಪ ಅರಣ್ಯ ಸಂರಕ್ಷಣಾಧಿಕಾರಿಗಳ ಕಛೇರಿ, ಶಿವಮೊಗ್ಗ ವಿಭಾಗ, ಶಿವಮೊಗ್ಗ**
**ಕಿರು ಅರಣ್ಯ ಉತ್ಪನ್ನ ಮರು ಟೆಂಡರ್–ಕಂ–ಹರಾಜು ಮಾರಾಟ ಸಂಕ್ಷಿಪ್ತ ಪ್ರಕಟಣೆ**
**ಕ್ರ.ಸಂ. ಎ4–ಎಂಎಫ್‌ಪಿ–ಸಿಆರ್–10/2008–09, ದಿನಾಂಕ: 2ನೇ ಸೆಪ್ಟೆಂಬರ್ 2008**

ಈ ಮೂಲಕ ಸಾರ್ವಜನಿಕರ ಅವಗಾಹನೆಗೆ ತಿಳಿಯಪಡಿಸುವುದೇನೆಂದರೆ ದಿನಾಂಕ:01.07.2008 ರಿಂದ 30.06.2010 ರವರೆಗೆ ಎರಡು ವರ್ಷಗಳ ಅವಧಿಗೆ ಶಿವಮೊಗ್ಗ ವಿಭಾಗದ ಈ ಕೆಳಕಂಡ ವಲಯಗಳಲ್ಲಿನ ಮೀಸಲು ಅರಣ್ಯಗಳು ಮತ್ತು ಸಣ್ಣ ಕಾಡುಗಳು, ಎಲ್ಲಾ ಸಣ್ಣ ಮತ್ತು ದೊಡ್ಡ ಕೆರೆ ದಂಡೆಗಳು, ಅರಣ್ಯ ಇಲಾಖೆಯ ಆಡಳಿತಕ್ಕೆ ಒಳಪಟ್ಟಿರುವ ಎಲ್ಲಾ ರಸ್ತೆ ಬದಿಯ ಮರಗಳು, ಕಾಯ್ದಿಟ್ಟ ಅರಣ್ಯ, ಸಣ್ಣ ಕಾಡುಗಳು, ಜಿಲ್ಲಾ ಕಾಡು (ಆಯಾ ವಲಯಗಳ ವ್ಯಾಪ್ತಿಗೆ ಒಳಪಟ್ಟಂತೆ ಮಾತ್ರ) ಮುಕ್ತ ಸರ್ಕಾರಿ ಜಮೀನು (ಮುಫತ್ ಮತ್ತು ಜಾಡಿ) ಕಾಡುಗಳಿಂದ ಈ ಕೆಳಗೆ ಸೂಚಿಸಿರುವ ತಪಶೀಲಿನಂತೆ ಗುತ್ತಿಗೆಯನ್ನು ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ಶಿವಮೊಗ್ಗ ವಿಭಾಗ, ಶಿವಮೊಗ್ಗ ಅಥವಾ ಅವರಿಂದ ನಿಯೋಜಿತರಾದವರಿಂದ ಟೆಂಡರ್–ಕಂ–ಹರಾಜು ಮೂಲಕ ವಿಕ್ರಯಿಸಲ್ಪಡುತ್ತದೆ. ಸದರಿ ಮರು ಟೆಂಡರ್–ಕಂ–ಹರಾಜಿನಲ್ಲಿ ಇಲಾಖೆಯಿಂದ ತಪ್ಪಿತಸ್ಥರಾದ ಗುತ್ತಿಗೆದಾರರು ಭಾಗವಹಿಸಲು ಅನರ್ಹರಿರುತ್ತಾರೆ.

ಟೆಂಡರ್ ಸ್ವೀಕರಿಸುವ ದಿನಾಂಕ: 25.10.2008 ಮಧ್ಯಾಹ್ನ 4.00 ಗಂಟೆವರೆಗೆ ಹಾಗೂ ಹರಾಜು ದಿನಾಂಕ: 25.10.2008 ಮಧ್ಯಾಹ್ನ 4.30 ಕ್ಕೆ ಅದೇ ದಿನ ಟೆಂಡರನ್ನು 04.45 ಕ್ಕೆ ತೆರೆಯಲಾಗುವುದು. ಒಂದು ವೇಳೆ ಮೇಲೆ ಹೇಳಿರುವ ದಿನಾಂಕದಂದು ಟೆಂಡರ್ ಹಾಕದಿದ್ದಲ್ಲಿ ಇದೇ ಟೆಂಡರ್ ಪ್ರಕ್ರಿಯೆಯನ್ನು ಮುಂದುವರಿಸಿ ಪುನಃ ಮರು ಟೆಂಡರನ್ನು ದಿನಾಂಕ 31.10.2008 ರಂದು ಟೆಂಡರ್ ಸ್ವೀಕರಿಸುವುದು ಹಾಗೂ ಹರಾಜು ದಿನಾಂಕ: 31.10.2008 ಮಧ್ಯಾಹ್ನ 4.30ಕ್ಕೆ ಅದೇ ದಿನ ಟೆಂಡರನ್ನು 04.45 ಕ್ಕೆ ತೆರೆಯಲಾಗುವುದು.

| ಕ್ರ. ಸಂ. | ಯೂನಿಟ್ ಸಂಖ್ಯೆ | ವಲಯದ ಹೆಸರು | ಅರಣ್ಯ ಉತ್ಪನ್ನದ ವಿವರ | ಇಎಂಡಿ ಮೊತ್ತ |
|---|---|---|---|---|
| 1 | I | ಆಗುಂಬೆ | ಮುರುಗನ ಹುಳಿ | 3000–00 |
| 2 | VI | ತೀರ್ಥಹಳ್ಳಿ | ತೂಪ್ರಾ ಎಲೆ | 3000–00 |
| 3 | VII | ತೀರ್ಥಹಳ್ಳಿ | ಮುರುಗನ ಹುಳಿ | 3000–00 |
| 4 | IX | ಮಂಡಗದ್ದೆ | ಮುರುಗನ ಹುಳಿ | 3000–00 |
| 5 | X | ರಿಪ್ಪನ್ ಪೇಟೆ | ತೂಪ್ರಾ ಎಲೆ | 3000–00 |
| 6 | XV | ರಿಪ್ಪನ್ ಪೇಟೆ (ಮಸರೂರು ಎಸ್.ಎಫ್) | ನೀಲಗಿರಿ ಸಿಟ್ರಿಡೋರಾ ಎಲೆ | 3000–00 |
| 7 | XVI | ರಿಪ್ಪನ್ ಪೇಟೆ (ಬರುವೆ & ಅರಸಾಳು ಎಸ್.ಎಫ್) | ನೀಲಗಿರಿ ಸಿಟ್ರಿಡೋರಾ ಎಲೆ | 3000–00 |

**ಷರತ್ತುಗಳು:**

1. ಈ ಕೆಳಕಂಡ ಗ್ರಾಮ ಅರಣ್ಯ ಸಮಿತಿಗೆ ಸಂಬಂಧಪಟ್ಟ ಅರಣ್ಯ ಪ್ರದೇಶದಲ್ಲಿ ಈ ಮೇಲ್ಕಂಡ ಕಿರು ಅರಣ್ಯ ಉತ್ಪನ್ನವು ಲಭ್ಯವಿದ್ದಲ್ಲಿ ಅದನ್ನು ಸಂಗ್ರಹಿಸಲು ಹಕ್ಕು ಇರುವುದಿಲ್ಲ.

| | | | |
|---|---|---|---|
| 1. | ಆಗುಂಬೆ ವಲಯ, ಮೇಗರವಳ್ಳಿ | – | 16 ಗ್ರಾಮ ಅರಣ್ಯ ಸಮಿತಿ ಪ್ರದೇಶಗಳು |
| 2. | ಮಂಡಗದ್ದೆ ವಲಯ | – | 19 ಗ್ರಾಮ ಅರಣ್ಯ ಸಮಿತಿ ಪ್ರದೇಶಗಳು |
| 3. | ರಿಪ್ಪನ್‌ಪೇಟೆ ವಲಯ | – | 20 ಗ್ರಾಮ ಅರಣ್ಯ ಸಮಿತಿ ಪ್ರದೇಶಗಳು |
| 4. | ತೀರ್ಥಹಳ್ಳಿ ವಲಯ | – | 21 ಗ್ರಾಮ ಅರಣ್ಯ ಸಮಿತಿ ಪ್ರದೇಶಗಳು |

2. ಎಫ್‌ಆರ್‌ಎಲ್‌ಹೆಚ್‌ಟಿ ಸಂಸ್ಥೆಯವರು ಸಂಗ್ರಹಣೆ ಮತ್ತು ನಿರ್ವಹಣೆ ಬಗ್ಗೆ (ಎನ್‌ಟಿಎಫ್‌ಪಿ) ಒಂದು ಯೋಜನೆಯನ್ನು ಹಮ್ಮಿಕೊಂಡಿದ್ದು, ಈ ಸಂಸ್ಥೆಗೆ ಸಂಬಂಧಪಟ್ಟ ಅರಣ್ಯ ಪ್ರದೇಶದಲ್ಲಿ ಈ ಮೇಲ್ಕಂಡ ಯಾವುದೇ ಕಿರು ಅರಣ್ಯ ಉತ್ಪನ್ನವನ್ನು ಸಂಗ್ರಹಿಸಲು ಯಾವುದೇ ಹಕ್ಕು ಇರುವುದಿಲ್ಲ. ಬಾಳೆಹಳ್ಳಿ ಎಸ್.ಎಫ್. ನಲ್ಲಿ 250 ಹೆ. ಅರಣ್ಯ ಪ್ರದೇಶ.
3. ಪ್ರತಿಯೊಂದು ಯೂನಿಟ್‌ಗೂ ಟೆಂಡರನ್ನು ಪ್ರತ್ಯೇಕವಾಗಿ ಸಲ್ಲಿಸುವುದು.
4. ಶಿವಮೊಗ್ಗ ವಿಭಾಗದಲ್ಲಿ ಅರಣ್ಯ ಗುತ್ತಿಗೆದಾರರಾಗಿ ನಿಮ್ಮ ಹೆಸರುಗಳನ್ನು ಪ್ರಸಕ್ತ ಸಾಲಿನಲ್ಲಿ ನೊಂದಾಯಿಸಿದವರು ಮಾತ್ರ ಟೆಂಡರ್ ಕಂ ಹರಾಜಿನಲ್ಲಿ ಭಾಗವಹಿಸಲು ಅವಕಾಶ ಇರುತ್ತದೆ.
5. ಟೆಂಡರ್ ಫಾರಂನ ಬೆಲೆ ರೂ. 225–00 (ತೆರಿಗೆ ಸೇರಿ) ಪಾವತಿಸಿ ಫಾರಂಗಳನ್ನು ಟೆಂಡರ್ ದಿನದಂದು ಪಡೆಯಬಹುದು. ಟೆಂಡರ್ ಫಾರಂಗಳನ್ನು ವರ್ಗಾಯಿಸಲು ಬರುವುದಿಲ್ಲ. ಟೆಂಡರ್ ಫಾರಂಗಳನ್ನು ಹರಾಜಿನ ದಿನ 1.00 ಗಂಟೆಯವರೆಗೆ ಕಛೇರಿಯಲ್ಲಿ ಕೊಡಲಾಗುತ್ತದೆ.
6. ಹರಾಜಿನ ದಿನವೇ ಹೆಚ್ಚಿನ ಸವಾಲುದಾರರು ಗುತ್ತಿಗೆಯ ಅರ್ಧ ಭಾಗದ ಹಣ ಮತ್ತು ಪೂರ್ಣ ಗುತ್ತಿಗೆಯ ಹಣದ ಮೇಲೆ ಚಾಲ್ತಿಯಲ್ಲಿರುವ ತೆರಿಗೆಗಳನ್ನು (ವರಮಾನ ತೆರಿಗೆ ಸೇರಿದಂತೆ) ಸಂದಾಯ ಮಾಡಬೇಕು. ಉಳಿದ

ಅರ್ಧಭಾಗದ ಗುತ್ತಿಗೆ ಹಣವನ್ನು ಸ್ಥಿರೀಕರಣದ ಆದೇಶ ತಲುಪಿದ ನಂತರದ 15 (ಹದಿನೈದು) ದಿನಗಳೊಳಗೆ ಪಾವತಿಸತಕ್ಕದ್ದು.

7. ಗುತ್ತಿಗೆದಾರರು ಟೆಂಡರ್ ಜೊತೆಯಲ್ಲಿ ನಿಗದಿಪಡಿಸಿದ ಇ.ಎಂ.ಡಿ ಯನ್ನು ಡಿ.ಡಿ. ರೂಪದಲ್ಲಿ ಮಾತ್ರ ಪಾವತಿಸಬೇಕು. ಡಿ.ಡಿ. ಮುಖಾಂತರ ಪಾವತಿಸದಿದ್ದ ಟೆಂಡರ್ ಫಾರಂಗಳನ್ನು ಸ್ವೀಕರಿಸಲಾಗುವುದಿಲ್ಲ. ಮತ್ತು ವ್ಯಾಟ್ ತೆರಿಗೆ, ಇನ್‌ಕಂ ಟ್ಯಾಕ್ಸ್ ಆಫೀಸರ್‌ನಿಂದ ಪಡೆದ ಎನ್.ಓ.ಸಿ. ಮತ್ತು ಸಾಲ್ವೆನ್ಸಿ ಸರ್ಟಿಫಿಕೇಟುಗಳನ್ನು ನಿಯಮಕ್ಕೆ ಅನುಸಾರವಾಗಿ ಲಗತ್ತಿಸಿರಬೇಕು.
8. ತಪ್ಪಿತಸ್ಥ ಗುತ್ತಿಗೆದಾರರು ಟೆಂಡರ್–ಕಂ–ಹರಾಜಿನಲ್ಲಿ ಭಾಗವಹಿಸುವುದನ್ನು ನಿಷೇಧಿಸಿದೆ.
9. ರಾಷ್ಟ್ರೀಯ ಉದ್ಯಾನವನ ಮತ್ತು ವನ್ಯಜೀವಿ ಅಭಯಾರಣ್ಯದಲ್ಲಿ ಕಿರುಕಾಡು ಉತ್ಪನ್ನದ ಸಂಗ್ರಹಣೆಯನ್ನು ನಿಷೇಧಿಸಲಾಗಿದೆ.
10. ಜಯಶೀಲರಾದ ಗುತ್ತಿಗೆದಾರರು ಅದೇ ದಿನದಂದು ಶೇಕಡ 50 ಭಾಗದ ಹಣವನ್ನು ಸ್ಥಿರೀಕರಣದ ಆದೇಶ ತಲುಪಿದ ನಂತರದಲ್ಲಿ 15 (ಹದಿನೈದು) ದಿನದೊಳಗಾಗಿ ಪಾವ್ತಿಸತಕ್ಕದ್ದು. ತಪ್ಪಿದಲ್ಲಿ ಬಾಕಿ ಹಣಕ್ಕೆ ಬಡ್ಡಿಯನ್ನು ವಸೂಲಿ ಮಾಡಲು ಕ್ರಮ ಜರುಗಿಸಲಾಗುವುದು. ಈ ಕೆಳಸಹಿದಾರರಿಗೆ ಜಮಾ ಆಗಿರುವ ಹಣವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ನಂತರ ಸದರಿ ಟೆಂಡರನ್ನು ಮರು ಟೆಂಡರ್ ಮಾಡುವ ಅಧಿಕಾರ ಹೊಂದಿರುತ್ತಾರೆ.
11. ಹರಾಜಿನಲ್ಲಿ ಟೆಂಡರ್‌ದಾರರು ಬಿಡ್ಡುದಾರರ ಸವಾಲನ್ನು ಸ್ವೀಕರಿಸುವ : ತಿರಸ್ಕರಿಸುವ ಅಥವಾ ತಿದ್ದುಪಡಿ ಮಾಡುವ ಹಕ್ಕನ್ನು ಕಾಯ್ದಿರಿಸಿಕೊಂಡಿರುತ್ತದೆ.
12. ಹೆಚ್ಚಿನ ವಿವರಗಳನ್ನು ಈ ಕಛೇರಿಯಿಂದ ಕಛೇರಿಯ ವೇಳೆಯಲ್ಲಿ ಪಡೆದುಕೊಳ್ಳಬಹುದು.

**ಬ್ರಿಜೇಶ್ ಕುಮಾರ್**

ಪಿ.ಆರ್. 484

ಉಪ ಅರಣ್ಯ ಸಂರಕ್ಷಣಾಧಿಕಾರಿ
ಶಿವಮೊಗ್ಗ ವಿಭಾಗ, ಶಿವಮೊಗ್ಗ.

## ಕೊಡಗು ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರ ಕಛೇರಿ

**ಅಧಿಸೂಚನೆ ಸಂಖ್ಯೆ:01/2008 ದಿನಾಂಕ: 29ನೇ ಆಗಸ್ಟ್ 2008**

**ವಿಷಯ:** ಶೀಘ್ರಲಿಪಿಗಾರ/ಬೆರಳಚ್ಚುಗಾರ/ಬೆರಳಚ್ಚು ನಕಲುಗಾರ/ಆದೇಶಿಕ ಜಾರಿಕಾರ ಮತ್ತು ಜವಾನ ಹುದ್ದೆಗಳ ನೇಮಕಾತಿ ಬಗ್ಗೆ.

**ಓದಲಾಗಿದೆ:** 1. ಉಚ್ಚ ನ್ಯಾಯಾಲಯದ ಪತ್ರ ಸಂಖ್ಯೆ: LCA-II/205/2004, ದಿನಾಂಕ: 02.05.2008.
2. ಸರ್ಕಾರಿ ಅಧಿಸೂಚನೆ ಸಂಖ್ಯೆ. LAW/LAC-2008 ದಿನಾಂಕ:13.2.2008.

ಕೊಡಗು ಜಿಲ್ಲಾ ನ್ಯಾಯಾಲಯದ ವ್ಯಾಪ್ತಿಯಲ್ಲಿ ಬರುವ ನ್ಯಾಯಾಲಯಗಳಲ್ಲಿ ಖಾಲಿಯಿರುವ ವಿವಿಧ ಹುದ್ದೆಗಳಿಗೆ ನೇರ ನೇಮಕಾತಿ ಮಾಡಲು ಅರ್ಹ ಅಭ್ಯರ್ಥಿಗಳಿಂದ ಅರ್ಜಿಯನ್ನು ಆಹ್ವಾನಿಸಲಾಗಿದೆ.

**1) ಭರ್ತಿ ಮಾಡಿದ ಅರ್ಜಿಗಳನ್ನು ಸಲ್ಲಿಸಲು ಕೊನೆಯ ದಿನಾಂಕ: 25–10–2008 ಸಂಜೆ: 5.00 ಗಂಟೆ**

ಅರ್ಜಿ ಸಲ್ಲಿಸಬೇಕಾದ ವಿಳಾಸ: ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು,
ಜಿಲ್ಲಾ ನ್ಯಾಯಾಲಯ,
ಕೊಡಗು ಜಿಲ್ಲೆ, ಮಡಿಕೇರಿ.

1) ಅಭ್ಯರ್ಥಿಯು ಈ ಅಧಿಸೂಚನೆಯಲ್ಲಿ ಲಗತ್ತೀಕರಿಸಿದ ನಿಗಧಿತ ಅರ್ಜಿ ನಮೂನೆಯಲ್ಲಿ ಬೆರಳಚ್ಚು ಮಾಡಿಸಿದ ಅಥವಾ ಗಣಕೀಕೃತ ಅರ್ಜಿಯನ್ನು ತನ್ನ ಕೈಬರವಣಿಗೆಯಲ್ಲಿ ಭರ್ತಿ ಮಾಡಿ ಸಲ್ಲಿಸತಕ್ಕದ್ದು.

2) ಒಂದಕ್ಕಿಂತ ಹೆಚ್ಚು ಹುದ್ದೆಗಳಿಗೆ ಅರ್ಜಿ ಹಾಕಲು ಬಯಸುವವರು ಆಯಾ ಹುದ್ದೆಗಳಿಗೆ ಪ್ರತ್ಯೇಕವಾಗಿ ನಿಗದಿತ ಅರ್ಜಿ ನಮೂನೆಗಳಲ್ಲಿ ಅರ್ಜಿ ಸಲ್ಲಿಸತಕ್ಕದ್ದು.

3) ಅಭ್ಯರ್ಥಿಯು ಇತ್ತೀಚಿನ ಪಾಸ್‌ಪೋರ್ಟ್ ಅಳತೆಯ ಫೋಟೋವನ್ನು ಅರ್ಜಿ ನಮೂನೆಯಲ್ಲಿ ತೋರಿಸಿರುವ ಜಾಗದಲ್ಲಿ ಅಂಟಿಸಿ ಅದರ ಮೇಲೆ ಸಹಿ ಮಾಡತಕ್ಕದ್ದು.

4) ಅರ್ಜಿ ನಮೂನೆಯೊಂದಿಗೆ ಸಲ್ಲಿಸಬೇಕಾಗಿರುವ ಶೈಕ್ಷಣಿಕ ವಿದ್ಯಾರ್ಹತೆಯ ಅಂಕಪಟ್ಟಿಗಳನ್ನು ಹಾಗೂ ಇತರ ಪ್ರಮಾಣ ಪತ್ರಗಳನ್ನು ಸ್ವಯಂ ದೃಢೀಕರಿಸತಕ್ಕದ್ದು. ಅರ್ಜಿಯೊಂದಿಗೆ ಮೂಲ ಪ್ರತಿಗಳನ್ನು ಲಗ್ತೀಕರಿಸುವ ಅವಶ್ಯಕತೆಯಿರುವುದಿಲ್ಲ, ಲಗ್ತೀಕರಿಸಿದ ಪ್ರಮಾಣ ಪತ್ರಗಳನ್ನು ಅರ್ಜಿ ಸಲ್ಲಿಸುವ ದಿನಾಂಕದ ಒಳಗೆ ಪಡೆದಿರಬೇಕು.

5) ಅಭ್ಯರ್ಥಿಗಳು ಅರ್ಜಿಯೊಂದಿಗೆ ತಮ್ಮ ನಡತೆ ಮತ್ತು ಶೀಲದ ಬಗ್ಗೆ ತಮ್ಮ ಸಂಬಂಧಿಯಲ್ಲದ ಸಮಾಜದ ಇಬ್ಬರು ಗಣ್ಯ ವ್ಯಕ್ತಿಗಳಿಂದ ಪಡೆದು ಎರಡು ಪ್ರಮಾಣ ಪತ್ರಗಳನ್ನು ಹಾಗೂ ಕೊನೆಯಲ್ಲಿ ವ್ಯಾಸಂಗ ಮಾಡಿದ ಶಾಲೆ:ವಿದ್ಯಾಲಯದಿಂದ ಪಡೆದ ಒಂದು ಪ್ರಮಾಣಪತ್ರವನ್ನು ಲಗ್ತೀಕರಿಸತಕ್ಕದ್ದು.

**II. ಹುದ್ದೆಗಳು**

**1. ಶೀಘ್ರಲಿಪಿಗಾರರು: 3 ಹುದ್ದೆಗಳು**

ವೇತನ ಶ್ರೇಣಿ: 7575–175–7800–200–8600–225–9500–250–10500–300–12300–350–13350 ಹಾಗೂ ಇತರ ಭತ್ಯೆಗಳು.

**ಹುದ್ದೆಗಳ ವರ್ಗೀಕರಣ:**

| ವರ್ಗೀಕರಣ | ಇತರೆ | ಮ.ಅ. | ಗ್ರಾ.ಅ. | ಒಟ್ಟು |
|---|---|---|---|---|
| ಸಾಮಾನ್ಯ ಅಭ್ಯರ್ಥಿ | 1 | – | 1 | 2 |
| ಪ್ರವರ್ಗ 2ಎ | – | 1 | – | 1 |
| **ಒಟ್ಟು** | **1** | **1** | **1** | **3** |

**ಶೈಕ್ಷಣಿಕ ವಿದ್ಯಾರ್ಹತೆ:**

ಅ. ಕರ್ನಾಟಕ ಪ್ರೌಢ ಶಿಕ್ಷಣ ಪರೀಕ್ಷಾ ಮಂಡಳಿ ನಡೆಸುವ ಎಸ್.ಎಸ್.ಎಲ್.ಸಿ. ಪರೀಕ್ಷೆಯಲ್ಲಿ ಉತ್ತೀರ್ಣತೆ: ಅಥವಾ ತತ್ಸಮಾನ ವಿದ್ಯಾರ್ಹತೆ.

ಆ. ಕರ್ನಾಟಕ ಸಾರ್ವಜನಿಕ ಶಿಕ್ಷಣ ಇಲಾಖೆಯು ನಡೆಸುವ ಹಿರಿಯ ದರ್ಜೆಯ ಕನ್ನಡ ಮತ್ತು ಆಂಗ್ಲ ಭಾಷೆಗಳ ಶೀಘ್ರಲಿಪಿ ಮತ್ತು ಬೆರಳಚ್ಚು ಪರೀಕ್ಷೆಗಳಲ್ಲಿ ತೇರ್ಗಡೆ ಹೊಂದಿರಬೇಕು ಅಥವಾ ಕರ್ನಾಟಕ ತಾಂತ್ರಿಕ ಮಂಡಳಿಯು ನಡೆಸುವ ಸೆಕ್ರೆಟೇರಿಯಲ್ ಪ್ರಾಕ್ಟೀಸ್ ಪಠ್ಯಕ್ರಮದ ಡಿಪ್ಲೋಮಾ ಪದವಿಯೊಂದಿಗೆ ಕನ್ನಡ ಮತ್ತು ಆಂಗ್ಲ ಭಾಷೆಗಳ ಶೀಘ್ರಲಿಪಿ ಮತ್ತು ಬೆರಳಚ್ಚು ವಿಷಯಗಳನ್ನು ಐಚ್ಛಿಕ ವಿಷಯಗಳನ್ನಾಗಿ ಹೊಂದಿರಬೇಕು ಅಥವಾ ತತ್ಸಮಾನ ವಿದ್ಯಾರ್ಹತೆ.

**ಅರ್ಹತಾ ಪರೀಕ್ಷೆ:**

1. ನಿಮಿಷಕ್ಕೆ 120 ಶಬ್ದಗಳಂತೆ 5 ನಿಮಿಷಗಳ ಅವಧಿಯ ಉಕ್ತಲೇಖನ ಮತ್ತು ಅದನ್ನು ಲಿಪ್ಯಂತರ ಮಾಡಲು 45 ನಿಮಿಷಗಳ ಅವಧಿ.

**2. ಬೆರಳಚ್ಚುಗಾರರು: 6 ಹುದ್ದೆಗಳು**

ಶ್ರೇಣಿ: 5800–100–6000–125–6500–150–7100–175–7800–200–8600–225–9500–250–10500 ಹಾಗೂ ಇತರ ಭತ್ಯೆಗಳು.

**ಹುದ್ದೆಗಳ ವರ್ಗೀಕರಣ:**

| ವರ್ಗೀಕರಣ | ಮ.ಅ. | ಗ್ರಾ.ಅ | ಕನ್ನಡ ಮಾಧ್ಯಮ | ಒಟ್ಟು |
|---|---|---|---|---|
| ಸಾಮಾನ್ಯ ಅಭ್ಯರ್ಥಿ | 1 | 1 | 1 | 3 |
| ಪ್ರವರ್ಗ 2ಎ | 1 | – | – | 1 |
| ಪ್ರವರ್ಗ 1 | 1 | – | – | 1 |
| ಪರಿಶಿಷ್ಟ ಜಾತಿ | – | 1 | – | 1 |
| **ಒಟ್ಟು** | **3** | **2** | **1** | **6** |

**ಶೈಕ್ಷಣಿಕ ವಿದ್ಯಾರ್ಹತೆ:**

ಅ. ಕರ್ನಾಟಕ ಪ್ರೌಢ ಶಿಕ್ಷಣ ಪರೀಕ್ಷಾ ಮಂಡಳಿ ನಡೆಸುವ ಎಸ್.ಎಸ್.ಎಲ್.ಸಿ. ಪರೀಕ್ಷೆಯಲ್ಲಿ ಉತ್ತೀರ್ಣತೆ ಅಥವಾ ತತ್ಸಮಾನ ವಿದ್ಯಾರ್ಹತೆ.

ಆ. ಕರ್ನಾಟಕ ಪ್ರೌಢ ಶಿಕ್ಷಣ ಪರೀಕ್ಷಾ ಮಂಡಳಿಯು ನಡೆಸುವ ಹಿರಿಯ ದರ್ಜೆಯ ಕನ್ನಡ ಮತ್ತು ಆಂಗ್ಲ ಭಾಷೆಗಳ ಬೆರಳಚ್ಚು ಪರೀಕ್ಷೆಗಳಲ್ಲಿ ತೇರ್ಗಡೆ ಹೊಂದಿರಬೇಕು ಅಥವಾ ತತ್ಸಮಾನ ವಿದ್ಯಾರ್ಹತೆ.

**ಅರ್ಹತಾ ಪರೀಕ್ಷೆ:**

ಅಭ್ಯರ್ಥಿಗೆ 15 ನಿಮಿಷಗಳ ಅವಧಿಯಂತೆ ಎರಡೂ ಭಾಷೆಗಳಲ್ಲಿ ಬೆರಳಚ್ಚು ಮಾಡಲು ಉಕ್ತಲೇಖನ ನೀಡಲಾಗುವುದು.

**3. ನಕಲು–ಬೆರಳಚ್ಚುಗಾರರು: 2 ಹುದ್ದೆಗಳು**

ವೇತನ ಶ್ರೇಣಿ: 5800–100–6000–125–6500–150–7100–175–7800–200–8600–225–9500–250–10500 ಹಾಗೂ ಇತರ ಭತ್ಯೆಗಳು.

**ಹುದ್ದೆಗಳ ವರ್ಗೀಕರಣ:**

| ವರ್ಗೀಕರಣ | ಇತರೆ | ಅಂಗವಿಕಲ | ಒಟ್ಟು |
|---|---|---|---|
| ಸಾಮಾನ್ಯ ಅಭ್ಯರ್ಥಿ | 1 | – | 1 |
| ಪರಿಶಿಷ್ಟ ಜಾತಿ | – | 1 | 1 |
| **ಒಟ್ಟು** | **1** | **1** | **2** |

**ಶೈಕ್ಷಣಿಕ ವಿದ್ಯಾರ್ಹತೆ:**

ಅ. ಕರ್ನಾಟಕ ಪ್ರೌಢ ಶಿಕ್ಷಣ ಪರೀಕ್ಷಾ ಮಂಡಳಿ ನಡೆಸುವ ಎಸ್.ಎಸ್.ಎಲ್.ಸಿ. ಪರೀಕ್ಷೆಯಲ್ಲಿ ಉತ್ತೀರ್ಣತೆ ಅಥವಾ ತತ್ಸಮಾನ ವಿದ್ಯಾರ್ಹತೆ.

ಆ. ಕರ್ನಾಟಕ ಪ್ರೌಢ ಶಿಕ್ಷಣ ಪರೀಕ್ಷಾ ಮಂಡಳಿಯು ನಡೆಸುವ ಕಿರಿಯ ದರ್ಜೆಯ ಕನ್ನಡ ಮತ್ತು ಆಂಗ್ಲ ಭಾಷೆಗಳ ಬೆರಳಚ್ಚು ಪರೀಕ್ಷೆಗಳಲ್ಲಿ ತೇರ್ಗಡೆ ಹೊಂದಿರಬೇಕು ಅಥವಾ ತತ್ಸಮಾನ ವಿದ್ಯಾರ್ಹತೆ.

**ಅರ್ಹತಾ ಪರೀಕ್ಷೆ:**

ಅಭ್ಯರ್ಥಿಗೆ 15 ನಿಮಿಷಗಳ ಅವಧಿಯಂತೆ ಎರಡೂ ಭಾಷೆಗಳಲ್ಲಿ ಬೆರಳಚ್ಚು ಮಾಡಲು ಉಕ್ತಲೇಖನ ನೀಡಲಾಗುವುದು.

**4. ಆದೇಶಿಕ ಜಾರಿಕಾರರು: 6 ಹುದ್ದೆಗಳು**

ಶ್ರೇಣಿ: 5200–100–6000–125–6500–150–7100–175–7800–200–8200 ಹಾಗೂ ಇತರ ಭತ್ಯೆಗಳು.

**ಹುದ್ದೆಗಳ ವರ್ಗೀಕರಣ:**

| ವರ್ಗೀಕರಣ | ಇತರೆ | ಮ.ಅ. | ಗ್ರಾ.ಅ. | ಒಟ್ಟು |
|---|---|---|---|---|
| ಸಾಮಾನ್ಯ ಅಭ್ಯರ್ಥಿ | 1 | 1 | 1 | 3 |
| ಪ್ರವರ್ಗ 2ಎ | – | 1 | – | 1 |
| ಪ್ರವರ್ಗ 3ಎ | 1 | – | – | 1 |
| ಪರಿಶಿಷ್ಟ ಜಾತಿ | – | – | 1 | 1 |
| **ಒಟ್ಟು** | **2** | **2** | **2** | **6** |

**ಶೈಕ್ಷಣಿಕ ವಿದ್ಯಾರ್ಹತೆ:**

ಅ. ಕರ್ನಾಟಕ ಪ್ರೌಢ ಶಿಕ್ಷಣ ಪರೀಕ್ಷಾ ಮಂಡಳಿ ನಡೆಸುವ ಎಸ್.ಎಸ್.ಎಲ್.ಸಿ. ಪರೀಕ್ಷೆಯಲ್ಲಿ ಉತ್ತೀರ್ಣತೆ ಅಥವಾ ತತ್ಸಮಾನ ವಿದ್ಯಾರ್ಹತೆ.

ಆ. ಡ್ರೈವಿಂಗ್ ಲೈಸೆನ್ಸ್‌ನ್ನು ಹೊಂದಿದ ಅಭ್ಯರ್ಥಿಗಳಿಗೆ ಆದ್ಯತೆ ನೀಡಲಾಗುವುದು.

**5. ಜವಾನರು: 9 ಹುದ್ದೆಗಳು**

ಶ್ರೇಣಿ: 4800–100–6000–125–6500–150–7100–175–7275 ಹಾಗೂ ಇತರ ಭತ್ಯೆಗಳು.

**ಹುದ್ದೆಗಳ ವರ್ಗೀಕರಣ:**

| ವರ್ಗೀಕರಣ | ಇತರೆ | ಮ.ಅ. | ಮಾ.ಸೈ. | ಗ್ರಾ.ಅ. | ಒಟ್ಟು |
|---|---|---|---|---|---|
| ಸಾಮಾನ್ಯ ಅಭ್ಯರ್ಥಿ | 1 | 1 | 1 | 1 | 4 |
| ಪ್ರವರ್ಗ 2ಎ | 1 | – | – | – | 1 |
| ಪ್ರವರ್ಗ 3ಎ | – | 1 | – | – | 1 |
| ಪ್ರವರ್ಗ 3ಬಿ | – | 1 | – | – | 1 |
| ಪರಿಶಿಷ್ಟ ಜಾತಿ | 1 | – | – | – | 1 |
| ಪರಿಶಿಷ್ಟ ಪಂಗಡ | – | 1 | – | – | 1 |
| **ಒಟ್ಟು** | **3** | **4** | **1** | **1** | **9** |

**ಶೈಕ್ಷಣಿಕ ವಿದ್ಯಾರ್ಹತೆ:**

ಅ. ಏಳನೇ ತರಗತಿಯಲ್ಲಿ ತೇರ್ಗಡೆ ಹೊಂದಿರಬೇಕು.

ಆ. ಕನ್ನಡ ಓದಲು ಬರೆಯಲು ತಿಳಿದಿರಬೇಕು.

**III. ವಯೋಮಿತಿ:**

ಅ. ಅರ್ಜಿಗಳನ್ನು ಸ್ವೀಕರಿಸಲು ನಿಗದಿಪಡಿಸಿದ ಕೊನೆಯ ದಿನಾಂಕದಂದು ಅಭ್ಯರ್ಥಿಯು ಕನಿಷ್ಟ 18 ವರ್ಷ ವಯಸ್ಸನ್ನು ಪೂರೈಸಿರತಕ್ಕದ್ದು.

ಆ. ಗರಿಷ್ಟ ವಯೋಮಿತಿ ಸಾಮಾನ್ಯ ವರ್ಗ : 33 ವರ್ಷಗಳು
2ಎ, 2ಬಿ,3ಎ,3ಬಿ : 36 ವರ್ಷಗಳು
ಪರಿಶಿಷ್ಟ ಜಾತಿ:ಪರಿಶಿಷ್ಟ ಪಂಗಡ ಪ್ರ.ವರ್ಗ–1 : 38 ವರ್ಷಗಳು
ಬ್ಯಾಕ್‌ಲಾಗ್ ಹುದ್ದೆ : 40 ವರ್ಷಗಳು

ಇ. ಮಾಜಿ ಸೈನಿಕರಿಗೆ ಗರಿಷ್ಟ ವಯೋಮಿತಿ, ಅವನು ಸಶಸ್ತ್ರ ದಳಗಳಲ್ಲಿ ಎಷ್ಟು ವರ್ಷ ಸೇವೆ ಸಲ್ಲಿಸಿರುವನೋ ಆ ವರ್ಷಗಳಿಗೆ ಮೂರು ವರ್ಷಗಳನ್ನು ಸೇರಿಸಿದರೆ ಎಷ್ಟು ವರ್ಷಗಳು ಆಗುವುದೋ ಅಷ್ಟು ವರ್ಷಗಳ ಸಡಿಲಿಕೆ.

ಈ. ವಿಧವೆಯರಿಗೆ ಮತ್ತು ಅಂಗವಿಕಲರಿಗೆ ಹತ್ತು ವರ್ಷಗಳ ಸಡಿಲಿಕೆ.

ಉ. ಹುಟ್ಟಿದ ದಿನಾಂಕವನ್ನು ತೋರಿಸುವ ಬಗ್ಗೆ ದೃಢೀಕರಿಸಿದ ಪ್ರಮಾಣ ಪತ್ರವನ್ನು ಸಲ್ಲಿಸತಕ್ಕದ್ದು.

**IV. ಮೀಸಲಾತಿ ಹಾಗೂ ವಯೋಮಿತಿ ರಿಯಾಯಿತಿ ಕೋರಿದಲ್ಲಿ ಹಾಜರು ಪಡಿಸಬೇಕಾದ ಸ್ವಯಂ ದೃಢೀಕೃತ ಪ್ರಮಾಣ ಪತ್ರಗಳು:–**

ಅ) ಸೈನಿಕ ಸೇವೆಯಿಂದ ಬಿಡುಗಡೆಯಾದ : ಮುಕ್ತಿ ಹೊಂದಿದ ಬಗೆಗಿನ ಪ್ರಮಾಣ ಪತ್ರ.

ಆ) ಜಾತಿ ಮೀಸಲಾತಿ ಕೋರುವ ಅಭ್ಯರ್ಥಿಗಳು ನಿಗದಿತ ನಮೂನೆಯಲ್ಲಿ ತಹಶೀಲ್ದಾರರಿಂದ ಪಡೆದಿರುವ ಪ್ರಮಾಣ ಪತ್ರ.

ಇ) ಗ್ರಾಮೀಣ ಮೀಸಲಾತಿ ಪ್ರಮಾಣ ಪತ್ರ ನಮೂನೆ–1 ಮತ್ತು 2ರಲ್ಲಿ,

ಈ) ಕನ್ನಡ ಮಾಧ್ಯಮದಲ್ಲಿ ವ್ಯಾಸಂಗ ಮಾಡಿದ ಪ್ರಮಾಣ ಪತ್ರ.

ಉ) ಅಂಗವಿಕಲ ಅಭ್ಯರ್ಥಿಗಳು ನಿಗಧಿಪಡಿಸಿದ ನಮೂನೆಯಲ್ಲಿ ಪಡೆದ ವೈದ್ಯಕೀಯ ಪ್ರಮಾಣ ಪತ್ರ. (ಶೇಕಡಾ 40ಕ್ಕಿಂತ ಕಡಿಮೆ ಇಲ್ಲದಂತಹ ಅಂಗವಿಕಲತೆಯುಳ್ಳ ಅಭ್ಯರ್ಥಿಗಳು ಮಾತ್ರ ಮೀಸಲಾತಿಯನ್ನು ಕೋರಲು ಅರ್ಹರು).

**V. ಆಯ್ಕೆ ವಿಧಾನ:**

ಅ) ಅಭ್ಯರ್ಥಿಗಳ ಆಯ್ಕೆಯು ಕರ್ನಾಟಕ ಅಧೀನ ನ್ಯಾಯಾಲಯಗಳ (ಲಿಪಿಕ ಮತ್ತು ಇತರ ಹುದ್ದೆಗಳ) (ನೇಮಕಾತಿ) (ತಿದ್ದುಪಡಿ) ನಿಯಮ 2007ರ ಪ್ರಕಾರ ನಡೆಸಲಾಗುವುದು.

ಆ) ಯಾವುದೇ ವರ್ಗಗಳ ಮಹಿಳಾ, ಗ್ರಾಮೀಣ, ಅಂಗವಿಕಲ ಅಥವಾ ಮಾಜಿ ಸೈನಿಕ ಮೀಸಲಾತಿ ಇರುವ ಹುದ್ದೆಗಳಿಗೆ ಅರ್ಹ ಅಭ್ಯರ್ಥಿಗಳು ಲಭ್ಯವಾಗದಿದ್ದ ಪಕ್ಷದಲ್ಲಿ ಆ ಸ್ಥಾನಗಳಿಗೆ ಅದೇ ವರ್ಗಗಳ ಅರ್ಹ ಇತರ ಅಭ್ಯರ್ಥಿಗಳಿಂದ ತುಂಬಿಕೊಳ್ಳಲಾಗುವುದು.

**VI. ಅಭ್ಯರ್ಥಿಗಳಿಗೆ ಸೂಚನೆ:**

ಅ) ಅಭ್ಯರ್ಥಿಗಳು ನೇಮಕಾತಿ ಸಂಬಂಧದಲ್ಲಿ ಯಾವುದೇ ಅಕ್ರಮ ಮತ್ತು ಅನುಚಿತ ಮಾರ್ಗವನ್ನು ಅನುಸರಿಸಿರುವುದು ಕಂಡು ಬಂದಲ್ಲಿ ಅಂತಹವರನ್ನು ನೇಮಕಾತಿಗೆ ಪರಿಗಣಿಸಲಾಗುವುದಿಲ್ಲ.

ಆ) ಅಪೂರ್ಣವಾಗಿರುವ, ಸಹಿ ಮಾಡದ ಮತ್ತು ವಿದ್ಯಾರ್ಹತೆ, ಮೀಸಲಾತಿ ಹಾಗೂ ವಯೋಮಿತಿ ರಿಯಾಯಿತಿ ಬಗ್ಗೆ ಸಂಬಂಧಪಟ್ಟ ದಾಖಲೆಗಳನ್ನು ಹೊಂದಿರದ ಅರ್ಜಿಗಳನ್ನು ತಿರಸ್ಕರಿಸಲಾಗುವುದು.

ಇ) ಸರ್ಕಾರಿ ಮತ್ತು ಅರೆ ಸರ್ಕಾರಿ ಸೇವೆಯಲ್ಲಿರುವ ಅಭ್ಯರ್ಥಿಗಳು ತಮ್ಮ ಅರ್ಜಿಗಳನ್ನು ಸಮುಚ್ಚಿತ ಮಾರ್ಗದ ಮುಖಾಂತರ ಸಲ್ಲಿಸಬೇಕು.

ಈ) ಅಭ್ಯರ್ಥಿಗಳು ತಮ್ಮ ಅರ್ಜಿಯ ಜೊತೆ 5.00 ರೂ.ಗಳ ಸ್ಟಾಂಪು ಲಗತ್ತಿಸಿರುವ ಸ್ವವಿಳಾಸವಿರುವ ಲಕೋಟೆಯನ್ನು ಲಗತ್ತಿಸಿರಬೇಕು.

ಉ) ಅರ್ಜಿದಾರರು ಯಾವ ಹುದ್ದೆಗಳಿಗೆ ಅರ್ಜಿಗಳನ್ನು ಸಲ್ಲಿಸುತ್ತಿದ್ದಾರೆಂಬುದನ್ನು ದಪ್ಪ ಅಕ್ಷರಗಳಲ್ಲಿ ಲಕೋಟೆಯ ಮೇಲೆ ನಮೂದಿಸಿರಬೇಕು.

ಊ) ಅಭ್ಯರ್ಥಿಗಳು ತಮ್ಮ ಸ್ವಂತ ಖರ್ಚಿನಲ್ಲಿ ಸಂದರ್ಶನಕ್ಕೆ ಹಾಜರಾಗುವುದು.

ಋ) ಅಭ್ಯರ್ಥಿಗೆ ಸಂದರ್ಶನಕ್ಕೆ ಹಾಜರಾಗಲು ಮಾಹಿತಿ ಸಿಗದಿದ್ದ ಪಕ್ಷದಲ್ಲಿ ಅವರು ಸಂದರ್ಶನಕ್ಕೆ ಹಾಜರಾಗಲು ಅನರ್ಹರೆಂದು ತಿಳಿಯತಕ್ಕದ್ದು. ಈ ಬಗ್ಗೆ ಯಾವುದೇ ಪತ್ರ ವ್ಯವಹಾರಗಳನ್ನು ನಡೆಸಲಾಗುವುದಿಲ್ಲ.

ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು,
ಕೊಡಗು, ಮಡಿಕೇರಿ.

**ಶೀಘ್ರಲಿಪಿಗಾರ/ಬೆರಳಚ್ಚುಗಾರ/ಬೆರಳಚ್ಚು–ನಕಲುಗಾರ/ಜಾರಿಕಾರ/ಜವಾನ ಹುದ್ದೆಗೆ ಅರ್ಜಿ**

**(ನಮೂನೆ–1)**

**ಜಿಲ್ಲಾ ಹಾಗೂ ಸತ್ರ ನ್ಯಾಯಾಧೀಶರು, ಕೊಡಗು, ಮಡಿಕೇರಿ**

**ಪ್ರಕಟಣೆ ಸಂಖ್ಯೆ: 1/2008 ದಿನಾಂಕ: 29.08.2008**

ಸೂಕ್ತ ಅಂಕಣವನ್ನು √ ಟಿಕ್ ಮಾಡಿ

ಇವರಿಗೆ:
ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು,
ಕೊಡಗು, ಮಡಿಕೇರಿ–571 201.

1) ಅಭ್ಯರ್ಥಿಯ ಹೆಸರು

2) ತಂದೆಯ ಹೆಸರು

3) ತಾಯಿಯ ಹೆಸರು

4) ಲಿಂಗ : ಪುರುಷ ☐ ಮಹಿಳೆ ☐

5) ಜನ್ಮ ದಿನಾಂಕ

6) ಪೂರ್ಣ ಅಂಚೆ ವಿಳಾಸ

ಪಿನ್‌ಕೋಡ್

7) ವರ್ಗೀಕರಣ (ಅ) ಜಾತಿ–ಉಪಜಾತಿ

| | | | | | |
|---|---|---|---|---|---|
| ಸಾಮಾನ್ಯ ವರ್ಗ | ☐ | ಪ್ರವರ್ಗ–1 | ☐ | ಪ್ರವರ್ಗ–3ಎ | ☐ |
| ಪರಿಶಿಷ್ಟ ಜಾತಿ | ☐ | ಪ್ರವರ್ಗ–2ಎ | ☐ | ಪ್ರವರ್ಗ–3ಬಿ | ☐ |
| ಪರಿಶಿಷ್ಟಪಂಗಡ | ☐ | ಪ್ರವರ್ಗ–2ಬಿ | ☐ | | |

ವರ್ಗೀಕರಣ(ಆ)

| | | | |
|---|---|---|---|
| ಸಾಮಾನ್ಯ ಅಭ್ಯರ್ಥಿ | ☐ | ಅಂಗವಿಕಲ | ☐ |
| ಮಹಿಳಾ ಅಭ್ಯರ್ಥಿ | ☐ | ವಿಧವೆ | ☐ |
| ಗ್ರಾಮೀಣ ಅಭ್ಯರ್ಥಿ | ☐ | ಮಾಜಿಸೈನಿಕ | ☐ |
| ಕನ್ನಡ ಮಾಧ್ಯಮ ಅಭ್ಯರ್ಥಿ | ☐ | ಯೋಜನೆನಿರಾಶ್ರಿತರು | ☐ |

8) ವೈವಾಹಿಕ ವಿವರ (ವಿವಾಹಿತರೇ:ಅವಿವಾಹಿತರೇ)

9) ವಯೋಮಿತಿ ರಿಯಾಯತಿ ಕೋರಿರುತ್ತೀರ (ಹೌದು ಎಂದಾದರೆ ಸೂಕ್ತ ದಾಖಲಾತಿ ಲಗತ್ತಿಸಿ)

| 10) ಶೈಕ್ಷಣಿಕ ವಿದ್ಯಾರ್ಹತೆ | ಉತ್ತೀರ್ಣರಾದ ವರ್ಷ ಮತ್ತು ತಿಂಗಳು | ಗರಿಷ್ಠ ಅಂಕಗಳು | ಪಡೆದ ಅಂಕಗಳು |
|---|---|---|---|
| 1. 7ನೇ: 10ನೇ ತರಗತಿ | | | |
| 2. ಕನ್ನಡ ಶೀಘ್ರಲಿಪಿ ಪ್ರೌಢದರ್ಜೆ | | | |
| 3. ಆಂಗ್ಲ ಶೀಘ್ರಲಿಪಿ ಪ್ರೌಢದರ್ಜೆ | | | |
| 4. ಕನ್ನಡ ಬೆರಳಚ್ಚು ಪ್ರೌಢದರ್ಜೆ | | | |
| 5. ಆಂಗ್ಲ ಬೆರಳಚ್ಚು ಪ್ರೌಢದರ್ಜೆ | | | |
| 6. ಕನ್ನಡ ಬೆರಳಚ್ಚು ಪ್ರಥಮದರ್ಜೆ | | | |
| 7. ಆಂಗ್ಲ ಬೆರಳಚ್ಚು ಪ್ರಥಮ ದರ್ಜೆ | | | |

| | | | |
|---|---|---|---|
| 8. ಇತರೆ | | | |

**ದೃಢೀಕರಣ**

ಈ ಮೇಲೆ ನನ್ನಿಂದ ಒದಗಿಸಲಾದ ಮಾಹಿತಿಗಳು ನನಗೆ ತಿಳಿದ ಮಟ್ಟಿಗೆ ಸತ್ಯವೆಂದು ಹಾಗೂ ಈ ಮಾಹಿತಿಗಳು ಅಸತ್ಯವೆಂದು ದೃಢಪಟ್ಟಲ್ಲಿ ನನ್ನ ಅಭ್ಯರ್ಥಿತನವನ್ನು ರದ್ದುಪಡಿಸಬಹುದು ಎಂದು ಈ ಮೂಲಕ ಘೋಷಿಸುತ್ತೇನೆ.

ಸ್ಥಳ: ಅಭ್ಯರ್ಥಿಯ ಸಹಿ

ದಿನಾಂಕ:

(ಸರ್ಕಾರಿ ಸೇವೆಯಲ್ಲಿರುವ ಅಭ್ಯರ್ಥಿಗಳಿಗೆ ಮಾತ್ರ ಅನ್ವಯಿಸುತ್ತದೆ)

**ದೃಢೀಕರಣ ಪತ್ರ**

ಶ್ರೀಮತಿ:ಶ್ರೀ.........................................................ರವರು.................................................................................

.........................................ಇಲಾಖೆಯಲ್ಲಿ.................................................................................................

(ಹುದ್ದೆ) ..........................................................(ಸರ್ಕಾರಿ ಸೇವೆಗೆ ಸೇರಿದ ದಿನಾಂಕ) ರಿಂದ ಸೇವೆ ಸಲ್ಲಿಸುತ್ತಿದ್ದಾರೆ.

ಸ್ಥಳ:

ದಿನಾಂಕ: ಇಲಾಖಾ ಮುಖ್ಯಸ್ಥರ ಸಹಿ ಮತ್ತು ಪದನಾಮ

(ಕಛೇರಿ ಮೊಹರಿನೊಂದಿಗೆ)

**ಸೂಚನೆ:**

ಅ) ಅರ್ಜಿಯೊಂದಿಗೆ 5 ರೂ.ಗಳ ಅಂಚೆ ಮುದ್ರಾಂಕ (Postal Stamp) ವನ್ನು ಹೊಂದಿರುವ ಸ್ವ–ವಿಳಾಸವಿರುವ ಲಕೋಟೆಯನ್ನು ಸಲ್ಲಿಸತಕ್ಕದ್ದು.

ಆ) ಅಭ್ಯರ್ಥಿಗಳು ಭರ್ತಿ ಮಾಡಿದ ಅರ್ಜಿ ನಮೂನೆಯ ನಕಲನ್ನು ತಮ್ಮ ಬಳಿ ಇರಿಸಿಕೊಳ್ಳತಕ್ಕದ್ದು.

ಇ) ಅನ್ವಯಿಸದೇ ಇರುವ ಕಾಲಂ ಅನ್ನು ಖಾಲಿ ಬಿಡಿ.

ಪಿ.ಆರ್. 495

**ಕಮಾಂಡೆಂಟ್‌ರವರ ಕಾರ್ಯಾಲಯ, 3ನೇ ಪಡೆ, ಕೆ.ಎಸ್.ಆರ್.ಪಿ., ಕೋರಮಂಗಲ, ಬೆಂಗಳೂರು–34**

**ಟೆಂಡರ್–ಕಮ್–ಬಹಿರಂಗ ಹರಾಜು**

**ಸಂಖ್ಯೆ: 59/ಲೆಕ್ಕ–3/ವಾಸಾವಿ/2006–07, ದಿನಾಂಕ: 10ನೇ ಸೆಪ್ಟೆಂಬರ್ 2008**

**ವಿಷಯ:** ಅನುಪಯುಕ್ತಗೊಳಿಸಿರುವ 1 ಸಂಖ್ಯೆ ಪೊಲೀಸ್ ವಾಹನವನ್ನು ದಿನಾಂಕ:15.10.2008ರಂದು ಟೆಂಡರ್ ಕಂ ಬಹಿರಂಗ ಹರಾಜು ಮಾಡುವ ಬಗ್ಗೆ.

**ಉಲ್ಲೇಖ:** 1. ಸರ್ಕಾರದ ಪತ್ರ ಸಂಖ್ಯೆ: ಹೆಚ್‌ಡಿ/17/ಇಎಂವಿ/2008 ದಿನಾಂಕ:05/06/2008.

2. ಮಾನ್ಯ ಡಿಜಿ ಮತ್ತು ಐಜಿಪಿ., ಕರ್ನಾಟಕ ರಾಜ್ಯ., ಬೆಂಗಳೂರುರವರ ಹಿಂಬರಹ ಪತ್ರ ಸಂ: ವಾಸಾ(1)59 2007–08, ದಿನಾಂಕ:23.06.2008.

ಈ ಮೂಲಕ ಸಾರ್ವಜನಿಕರಿಗೆ ತಿಳಿಯಪಡಿಸುವುದೇನೆಂದರೆ, 3ನೇ ಪಡೆ, ಕೆ.ಎಸ್.ಆರ್.ಪಿ., ಕೋರಮಂಗಲ, ಬೆಂಗಳೂರು–34ರ ಘಟಕದ ಈ ಕೆಳಕಂಡ 1 ಸಂಖ್ಯೆ ನಿರುಪಯುಕ್ತ ಪೊಲೀಸ್ ವಾಹನವನ್ನು ದಿನಾಂಕ:15.10.2008 ರಂದು ಬೆಳಿಗ್ಗೆ 11.00 ಗಂಟೆಗೆ 3ನೇ ಪಡೆ, ಕೆ.ಎಸ್.ಆರ್.ಪಿ., ವಾಹನ ಸಾರಿಗೆ ವಿಭಾಗದ ಆವರಣದಲ್ಲಿ ಟೆಂಡರ್ ಕಂ ಬಹಿರಂಗ ಹರಾಜು ಮಾಡಲಾಗುವುದು.

**ಹರಾಜು ಮಾಡಲು ಉದ್ದೇಶಿಸಿರುವ ನಿರುಪಯುಕ್ತ ವಾಹನದ ವಿವರಗಳು**

| ಕ್ರ. ಸಂ. | ವಾಹನದ ನೋಂದಣಿ ಸಂಖ್ಯೆ | ಉತ್ಪಾದಕರು | ಉತ್ಪಾದಕ ವರ್ಷ | ವಾಹನಗಳ ವಿಧ | ಇಂಧನ ಬಳಕೆ |
|---|---|---|---|---|---|
| 1 | ಕೆಎ–13 ಜಿ–234 | ಟಾಟಾ 807 ಬಸ್ | 1992 | ಬಸ್ | ಡೀಜಲ್ |

**ಹರಾಜಿನ ಷರತ್ತು ಮತ್ತು ನಿಭಂದನೆಗಳು**

1) ಮೊಹರು ಮಾಡಿದ ಟೆಂಡರ್ (ಸೀಲ್ಡ್ ಕವರ್) ಲಕೋಟೆಯನ್ನು ಕಮಾಂಡೆಂಟ್, 3ನೇ ಪಡೆ, ಕೆ.ಎಸ್.ಆರ್.ಪಿ., ಕೋರಮಂಗಲ, ಬೆಂಗಳೂರುರವರ ವಿಳಾಸಕ್ಕೆ "ಅನುಪಯುಕ್ತ ವಾಹನದ ಖರೀದಿಗಾಗಿ ಟೆಂಡರ್" ಎಂದು ಬರೆದು ಕಳುಹಿಸಬೇಕು.

2) ಅತೀ ಹೆಚ್ಚಿನ ಬೆಲೆಯನ್ನು ಅಂಕಿ ಮತ್ತು ಅಕ್ಷರದಲ್ಲಿ ಬರೆದಿರಬೇಕು.
3) ಟೆಂಡರ್ ಫಾರಂಗಳನ್ನು ವರ್ಗಾವಣೆ ಮಾಡಲಾಗುವುದಿಲ್ಲ.
4) ಬಿಡ್‌ದಾರರು/ಟೆಂಡರ್‌ದಾರರು ರೂ.5000 (ರೂ. ಐದು ಸಾವಿರ) ಗಳನ್ನು ಹರಾಜು ಪ್ರಾರಂಭಿಸುವುದಕ್ಕಿಂತ ಮೊದಲು ಕಮಾಂಡೆಂಟ್, 3ನೇ ಪಡೆ, ಕೆ.ಎಸ್.ಆರ್.ಪಿ., ಕೋರಮಂಗಲ ಬೆಂಗಳೂರು ರವರ ಹೆಸರಿನಲ್ಲಿ ಠೇವಣಿಯಾಗಿ ಇಡತಕ್ಕದ್ದು.
5) ಹರಾಜು ಮಾಡುವ ಅಧಿಕಾರಿಯವರು ಯಾವುದೇ ಕಾರಣವಿಲ್ಲದೆ ಬಿಡ್‌ನ್ನು ಮುನ್ಸೂಚನೆಯಿಲ್ಲದೆ ಹಸ್ತಾಂತರ ಮಾಡಲು ಒಪ್ಪಿಕೊಳ್ಳುವ ಅಥವಾ ತಿರಸ್ಕರಿಸುವ ಅಧಿಕಾರವನ್ನು ಹೊಂದಿರುತ್ತಾರೆ.
6) ಪೂರ್ಣಗೊಳಿಸಿದ ಟೆಂಡರ್ ಫಾರಂಗಳನ್ನು ದಿನಾಂಕ: 14.10.2008 ರ ಅಪರಾಹ್ನ 17.00 ಗಂಟೆಯವರೆಗೆ ಸ್ವೀಕರಿಸಲಾಗುವುದು. ನಂತರ ಬಂದ ಟೆಂಡರ್ ಫಾರಂಗಳನ್ನು ಪರಿಗಣಿಸಲಾಗುವುದಿಲ್ಲ.
7) ಬಹಿರಂಗ ಹರಾಜಿನಲ್ಲಿ ಅತೀ ಹೆಚ್ಚಿನ ಬೆಲೆ (ದರವನ್ನು) ದಾಖಲುಗೊಳಿಸಿದ ನಂತರ ಸ್ವೀಕೃತವಾದ ಟೆಂಡರ್‌ಗಳನ್ನು ಕಮಾಂಡೆಂಟ್‌ರವರು ಸಾರ್ವಜನಿಕರ ಸಮಕ್ಷಮದಲ್ಲಿ ಸೀಲ್ಡ ಕವರ್ ತೆರೆದು ಬಹಿರಂಗಪಡಿಸುವರು. ಈ ಎರಡರಲ್ಲಿ ಅತೀ ಹೆಚ್ಚಿನ ದರವನ್ನು ಯಾರು ನಮೂದಿಸಿರುವರೋ ಅವರನ್ನು ಯಶಸ್ವಿ ಟೆಂಡರ್ / ಸವಾಲುದಾರರೆಂದು ಪರಿಗಣಿಸಲಾಗುವುದು.
8) ಯಶಸ್ವಿಯಾದ ಟೆಂಡರ್‌ದಾರರು / ಸವಾಲುದಾರರು ವಾಹನದ ಒಟ್ಟು ಬೆಲೆಯ ಶೇಕಡ 25 ರಷ್ಟು ಹಣವನ್ನು (ಠೇವಣಿ ಹೊರತುಪಡಿಸಿ) ಸ್ಥಳದಲ್ಲಿಯೇ ತುಂಬಬೇಕು. ಸದರಿ ಹರಾಜಿನಲ್ಲಿ ಕರ್ನಾಟಕ ಸರ್ಕಾರದ ಆದೇಶ ಸಂಖ್ಯೆ. ಹೆಚ್.ಡಿ.17/ಇಎಂವಿ/2008–09, ದಿನಾಂಕ: 05.06.2008 ರಲ್ಲಿ ರಚಿತವಾಗಿರುವ ಸಮಿತಿಯವರು ದೃಢೀಕರಿಸಿದ ನಂತರವೇ ಉಳಿದ ಶೇಕಡ 75 ರಷ್ಟು ಹಣವನ್ನು (ತೆರಿಗೆ ಸೇರಿ) ಡಿ.ಡಿ. ಮುಖಾಂತರ ಪಾವತಿ ಮಾಡಿ ಹರಾಜಿನಲ್ಲಿ ಪಡೆಯಲಾದ ವಾಹನವನ್ನು 3 ದಿನಗಳೊಳಗಾಗಿ ತಮ್ಮ ಸ್ವಂತ ಖರ್ಚಿನಿಂದ ತೆಗೆದುಕೊಂಡು ಹೋಗುವುದು. ತಪ್ಪಿದಲ್ಲಿ ಅವರು ತುಂಬಿರುವ ಶೇಕಡ 25 ರಷ್ಟು ಹಣವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಲಾಗುವುದು.
9) ಹರಾಜು ಮುಗಿದ ನಂತರ ಯಶಸ್ವಿಯಾಗದ ಟೆಂಡರ್/ಸವಾಲುದಾರರಿಗೆ ಠೇವಣಿ ಹಣ / ಡಿ.ಡಿ. ಯನ್ನು ಸ್ಥಳದಲ್ಲಿಯೇ ಹಿಂತಿರುಗಿಸಲಾಗುವುದು.
10) ಸರ್ಕಾರದ ವಾಹನಗಳ ಹರಾಜಿನಲ್ಲಿ ಭಾಗವಹಿಸುವ ಟೆಂಡರ್/ಸವಾಲುದಾರರು ಸರ್ಕಾರಿ ನಿಯಮವನ್ನು ಪಾಲಿಸಬೇಕು.
11) ಮೋಟಾರು ವಾಹನಗಳ ತೆರಿಗೆಯನ್ನು ಚಾಲ್ತಿಯಲ್ಲಿರುವ ದರ/ನಿಯಮಗಳ ಮೇಲೆ ವಸೂಲು ಮಾಡಲಾಗುವುದು.
12) ತಪ್ಪು ಗ್ರಹಿಕೆಯಿಂದ ಇಲಾಖೆಗೆ ನಷ್ಟವಾಗುವಂತಹ ಸಂದರ್ಭ ಉದ್ಭವಿಸಿದಲ್ಲಿ ಅಂತಹ ಟೆಂಡರ್:ಸವಾಲುದಾರರು ಮುಂಗಡವಾಗಿ ಕಟ್ಟಲ್ಪಟ್ಟ ಠೇವಣಿ ಹಣದಲ್ಲಿ ವಸೂಲಿ ಮಾಡುವ ಅಧಿಕಾರವು ಕಮಾಂಡೆಂಟ್‌ರವರ ತೀರ್ಮಾನಕ್ಕೆ ಒಳಪಟ್ಟಿರುತ್ತದೆ. ತಪ್ಪಿದಲ್ಲಿ ಸಂಬಂಧಪಟ್ಟವರ ವಿರುದ್ಧ ಕಾನೂನು ಬದ್ಧವಾಗಿ ಕ್ರಮ ತೆಗೆದುಕೊಳ್ಳಲಾಗುವುದು.
13) ಹರಾಜಿನಲ್ಲಿ ಯಾವುದೇ ಟೆಂಡರ್ ಸವಾಲನ್ನು ಯಾವುದೇ ಕಾರಣಕ್ಕಾಗಿ ರದ್ದುಗೊಳಿಸುವ ಅಥವಾ ತಿರಸ್ಕರಿಸುವ ಅಧಿಕಾರವನ್ನು ಕಮಾಂಡೆಂಟ್‌ರವರು ಹೊಂದಿರುತ್ತಾರೆ. ಯಾವುದೇ ವಾದ ವಿವಾದ ಉದ್ಭವಿಸಿದ್ದಲ್ಲಿ ಮಾನ್ಯ ಡೈರೆಕ್ಟರ್ ಜನರಲ್ ಮತ್ತು ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ಕರ್ನಾಟಕ ರಾಜ್ಯ, ಬೆಂಗಳೂರುರವರು ನೀಡುವ ನಿರ್ಣಯವೇ ಅಂತಿಮವಾಗಿರುತ್ತದೆ.
14) ವಾಹನವನ್ನು ಹೇಗಿದೆಯೋ ಹಾಗೆ ಈಗ ಇರುವ ಸ್ಥಳದಲ್ಲಿಯೇ ಹರಾಜು ಮಾಡಲಾಗುವುದು.
15) ಇಚ್ಛೆಯುಳ್ಳ ಟೆಂಡರ್/ಸವಾಲುದಾರರು ಹರಾಜು ಮಾಡಲಿರುವ ನಿರುಪಯುಕ್ತ ವಾಹನವನ್ನು ಯಥಾಸ್ಥಿತಿಯಲ್ಲಿ ಕಮಾಂಡೆಂಟ್‌ರವರ ಕಛೇರಿ, 3ನೇ ಪಡೆ, ಕೆ.ಎಸ್.ಆರ್.ಪಿ., ಬೆಂಗಳೂರು ಈ ಘಟಕದ ವಾಹನ ಸಾರಿಗೆ ವಿಭಾಗದ ಆವರಣದಲ್ಲಿ ಕಛೇರಿಯ ವೇಳೆಯಲ್ಲಿ ನೋಡಬಹುದು.

ಕಮಾಂಡೆಂಟ್,
3ನೇ ಪಡೆ, ಕೆ.ಎಸ್.ಆರ್.ಪಿ.,
ಬೆಂಗಳೂರು – 34.

ಪಿ.ಆರ್. 508

**ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ**
**ಕಾರ್ಯನಿರ್ವಾಹಕ ಇಂಜಿನಿಯರ್ ಕಛೇರಿ, ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ, ಮಂಗಳೂರು ವಿಭಾಗ, ಮಂಗಳೂರು**
**ಇ – ಟೆಂಡರ್ ಪ್ರಕಟಣೆ (ದ್ವಿ ಲಕೋಟೆ ಪದ್ಧತಿ)**
**ಕೆಪಿಡಬ್ಲ್ಯುಡಿ:2008–09:ಎಇ–1:ವರ್ಕ್–ಇಡೆಂಟ್ 3, ದಿನಾಂಕ: 17ನೇ ಸೆಪ್ಟೆಂಬರ್ 2008**

ಈ ಕೆಳಗಿನ ಕಾಮಗಾರಿಗೆ ಸಂಬಂಧಿಸಿದಂತೆ ಇ ಟೆಂಡರನ್ನು ಕರ್ನಾಟಕ ರಾಜ್ಯಪಾಲರ ಪರವಾಗಿ ಕರ್ನಾಟಕ ಸರ್ಕಾರದ ಇ–ಪ್ರೊಕ್ಯೂರ್‌ಮೆಂಟ್ ಪೋರ್ಟಲ್ ಇದರಲ್ಲಿ ಪ್ರಕಟಿಸಲಾಗಿದೆ. ದಯಮಾಡಿ ಅಂತರ್‌ಜಾಲದ ವೆಬ್‌ಸೈಟ್ https://eproc.karnataka.gov.in ನೋಡಿ ಟೆಂಡರ್ ದಾಖಲೆಗಳನ್ನು ಪಡೆಯಬಹುದಾಗಿ ಕೋರಲಾಗಿದೆ. ಟೆಂಡರು ಸ್ವೀಕರಿಸುವ ಕೊನೆಯ ದಿನಾಂಕವನ್ನು 22.10.2008 ರಂದು ಅಪರಾಹ್ನ 4.00 ಗಂಟೆಯವರೆಗೆ, ತಾಂತ್ರಿಕ ಬಿಡ್ಡನ್ನು ತೆರೆಯುವ ದಿನಾಂಕ: 25.10.2008 ಪೂರ್ವಾಹ್ನ 11.00 ಗಂಟೆಗೆ ಮತ್ತು ಆರ್ಥಿಕ ಬಿಡ್ಡನ್ನು ತೆರೆಯುವ ದಿನಾಂಕ:3.11.2008 ಪೂರ್ವಾಹ್ನ 11.00 ಗಂಟೆಗೆ ಎಂದು ನಿಗದಿಪಡಿಸಲಾಗಿದೆ. ಇ–ಪ್ರೊಕ್ಯೂರ್‌ಮೆಂಟ್ ಬಗ್ಗೆ ಹೆಚ್ಚಿನ ಮಾಹಿತಿಗಳನ್ನು Govt help desk ಮೂಲಕ ಸಹ ತಿಳಿದುಕೊಳ್ಳಬಹುದು. ದೂರವಾಣಿ ಕರೆ:080 22485867.

| ಕ್ರ. ಸಂ. | ಕಾಮಗಾರಿಯ ಹೆಸರು | ಟೆಂಡರಿಗಿಟ್ಟ ಮೊತ್ತ (ರೂ. ಲಕ್ಷಗಳಲ್ಲಿ) |
|---|---|---|
| 1. | ಮಂಗಳೂರು ವಿಭಾಗದಡಿ ಕಡೂರು–ಕಾಂಞಂಗಾಡ್ (ರಾಜ್ಯ ಹೆದ್ದಾರಿ–64) ರಸ್ತೆಯ ಬೆಳ್ತಂಗಡಿ ಮತ್ತು ಬಂಟ್ವಾಳ ತಾಲ್ಲೂಕಿನಲ್ಲಿ ಹಾಗೂ ಹೋಗುವ ರಸ್ತೆ ಸರಪಳಿ 99.40 ರಿಂದ 166.85 ಕಿ.ಮೀ.ವರೆಗಿನ (67.45 ಕಿ.ಮೀ. ಉದ್ದ) ಆಯ್ದ ಭಾಗಗಳಲ್ಲಿ ರಸ್ತೆ ಅಭಿವೃದ್ಧಿ ಕಾಮಗಾರಿ. | ರೂ. 150.00 |
| 2. | ಮಂಗಳೂರು ವಿಭಾಗದಡಿ ಬರುವ ಬೆಂಗಳೂರು–ಜಾಲ್ಸೂರು ರಾಜ್ಯ ಹೆದ್ದಾರಿ–85 ರಸ್ತೆಯ ಸರಪಳಿ 291.51 ರಿಂದ 295.71 (4.20 ಕಿ.ಮೀ. ಉದ್ದ) ದವರೆಗಿನ ಅಭಿವೃದ್ಧಿ ಕೆಲಸ (ಬಿಸ್ಲೇಘಾಟ್) | ರೂ. 120.00 |

ಕಾರ್ಯನಿರ್ವಾಹಕ ಇಂಜಿನಿಯರ್, ಪರವಾಗಿ
ಪಿ.ಆರ್. 501 ಲೋಕೋಪಯೋಗಿ, ಬಂದರು ಮತ್ತು ಒಳನಾಡು
ಜಲಸಾರಿಗೆ ಇಲಾಖೆ, ಮಂಗಳೂರು ವಿಭಾಗ, ಮಂಗಳೂರು.

**ಕಾರ್ಯನಿರ್ವಾಹಕ ಇಂಜಿನಿಯರ್, ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ ತುಮಕೂರು**
**ಸಂಕ್ಷಿಪ್ತ ಅಲ್ಪಾವಧಿ ಟೆಂಡರು ಪ್ರಕಟಣೆ ದಿನಾಂಕ: 12ನೇ ಸೆಪ್ಟೆಂಬರ್ 2008**

ಕರ್ನಾಟಕ ಸರ್ಕಾರದ ರಾಜ್ಯಪಾಲರ ಪರವಾಗಿ ಲೋಕೋಪಯೋಗಿ ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖಾ ವಿಭಾಗ, ತುಮಕೂರು, ಕರ್ನಾಟಕ ಇವರ ವತಿಯಿಂದ ತುಮಕೂರು ನಗರದಲ್ಲಿನ ಉಪ್ಪಾರಹಳ್ಳಿ ಬಳಿ ಎಲ್ ಸಿ ಸಂಖ್ಯೆ 40–41 ರ ಬದಲಿಗೆ ರೈಲ್ವೆ ಮೇಲು ಸೇತುವೆ ನಿರ್ಮಾಣದಲ್ಲಿ ಅಪ್ರೋಚ್ ಕಾಮಗಾರಿಗಳ ಬಗ್ಗೆ ದ್ವಿಲಕೋಟೆ ಪದ್ಧತಿಯಲ್ಲಿ ರೂ: 1152–52 ಲಕ್ಷಗಳಿಗೆ ಟೆಂಡರ್‌ಗಳನ್ನು ಆಹ್ವಾನಿಸಲಾಗಿದೆ.

ಕಾಮಗಾರಿಗಳಿಗೆ ಸಂಬಂಧಿಸಿದಂತೆ ಟೆಂಡರ್ ಪ್ರಕ್ರಿಯೆ ವಿವರಗಳು ಈ ಕೆಳಗಿನಂತಿವೆ

| | | | |
|---|---|---|---|
| 1. | ಕಾಮಗಾರಿಯ ಟೆಂಡರ್‌ಗೆ ಇಡಲಾದ ಮೊತ್ತ | : | ರೂ. 1152–52 ಲಕ್ಷಗಳು |
| 2. | ಇ ಎಂ ಡಿ ಮೊತ್ತ | : | ರೂ. 15–00 ಲಕ್ಷಗಳು |
| 3. | ಟೆಂಡರ್‌ಗೆ ಸಂಬಂಧಿಸಿದ ವಿಚಾರಣೆ ಮತ್ತು ಸ್ಪಷ್ಟೀಕರಣಗಳಿಗೆ ಕೊನೆಯ ದಿನಾಂಕ ಮತ್ತು ವೇಳೆ | : | 20.10.2008 ರ ಸಂಜೆ 5.00 ಗಂಟೆಯವರೆಗೆ |
| 4. | ಇ ಪ್ರೊಕ್ಯೂರ್‌ಮೆಂಟ್ ಮೂಲಕ ಟೆಂಡರ್‌ಗಳನ್ನು ಸ್ವೀಕರಿಸಲು ಕೊನೆಯ ದಿನಾಂಕ ಮತ್ತು ವೇಳೆ | : | 22.10.2008 ರ ಸಂಜೆ 4.00 ಗಂಟೆಯವರೆಗೆ |
| 5. | ತಾಂತ್ರಿಕ ಬಿಡ್ ಗಳನ್ನು ತೆರೆಯುವ ದಿನಾಂಕ ಮತ್ತು ವೇಳೆ | : | 25.10.2008 ರ ಬೆಳಿಗ್ಗೆ 10.30 ಗಂಟೆಯವರೆಗೆ |
| 6. | ಅರ್ಹ ಟೆಂಡರ್‌ಗಳ ಆರ್ಥಿಕ ಬಿಡ್ ತೆರೆಯುವ ದಿನಾಂಕ ಮತ್ತು ವೇಳೆ | : | 28.10.2008 ರ ಬೆಳಿಗ್ಗೆ 10.30 ಗಂಟೆಯವರೆಗೆ |

ಲೋಕೋಪಯೋಗಿ ಇಲಾಖೆ ಮತ್ತು ಇ ಪ್ರೊಕ್ಯೂರ್‌ಮೆಂಟ್ ಪೋರ್ಟಲ್‌ನಲ್ಲಿ ನೊಂದಾಯಿತ ಗುತ್ತಿಗೆದಾರರು ಇ ಪ್ರೊಕ್ಯೂರ್‌ಮೆಂಟ್ ಪ್ರಕ್ರಿಯೆಯಲ್ಲಿ ಭಾಗವಹಿಸಲು ಅರ್ಹರಾಗಿರುತ್ತಾರೆ.

ಈ ಬಗ್ಗೆ ಹೆಚ್ಚಿನ ವಿವರಗಳನ್ನು ಕಾರ್ಯಪಾಲಕ ಇಂಜಿನಿಯರ್, ಲೋಕೋಪಯೋಗಿ ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖಾ ವಿಭಾಗ, ತುಮಕೂರು ಜಿಲ್ಲೆ, ಕರ್ನಾಟಕ ರಾಜ್ಯ ರವರ ಕಚೇರಿಯಲ್ಲಿ ಕಚೇರಿ ಕೆಲಸದ ವೇಳೆಯಲ್ಲಿ ಪಡೆಯಬಹುದಾಗಿದೆ. ಹಾಗೂ ವೆಬ್ ಸೈಟ್ ಮೂಲಕ ಸಂಖ್ಯೆ: www.eproc.karnataka.gov.in. ರಲ್ಲಿ ಪಡೆಯಬಹುದಾಗಿದೆ.

ಕಾರ್ಯನಿರ್ವಾಹಕ ಇಂಜಿನಿಯರ್,
ಲೋಕೋಪಯೋಗಿ, ಬಂದರು ಮತ್ತು ಒಳನಾಡು
ಜಲಸಾರಿಗೆ ಇಲಾಖೆ, ತುಮಕೂರು.

ಪಿ.ಆರ್. 504

## ಕರ್ನಾಟಕ ರಾಜ್ಯ ಅರಣ್ಯ ಕೈಗಾರಿಕಾ ನಿಗಮ ನಿಯಮಿತ

**[ಕರ್ನಾಟಕ ಸರ್ಕಾರದ ಒಂದು ಉದ್ಯಮ]**

**# 45, ಎ ನ್ಯೂ ಟಿಂಬರ್ ಯಾರ್ಡ್ ಲೇಔಟ್ ಮೈಸೂರು ರಸ್ತೆ,ಬೆಂಗಳೂರು–560 026**

**ಟೆಲಿಫೋನ್ : 080-26748301, ಟೆಲಿಫ್ಯಾಕ್ಸ್: 080-26745072**

### ಟೆಂಡರ್ ಪ್ರಕಟಣೆ

**ಸಂಖ್ಯೆ:ಕೆಎಸ್ಎಫ್ಐಸಿ.ಟಿಇಸಿ.ಸಿಆರ್.ಟೆಂಡರ್2008.09, ದಿನಾಂಕ: 16ನೇ ಸೆಪ್ಟೆಂಬರ್ 2008**

ಕರ್ನಾಟಕ ರಾಜ್ಯ ಅರಣ್ಯ ಕೈಗಾರಿಕಾ ನಿಗಮ ನಿಯಮಿತ, ಟಿಂಬರ್ ಯಾರ್ಡ್ ಲೇಔಟ್, ಬೆಂಗಳೂರು, ಇಲ್ಲಿಗೆ ಕತ್ತರಿಸಿದ ವಿವಿಧ ಜಾತಿಯ ಮರದ ವಿವಿಧ ಅಳತೆಯ ಸೈಜುಗಳು, ಹಲಗೆಗಳು, ಮಾವಿನ ಮರದ ಕೋರ್ ಮತ್ತು ಲಿಪ್ಪಿಂಗ್ ಸೈಜುಗಳನ್ನು 2008-09 [01.10.2008 ರಿಂದ 31.03.2009 ರವರೆಗೆ] ನೇ ಸಾಲಿಗೆ ಸರಬರಾಜು ಮಾಡಲು ವ್ಯಾಟ್ ಕಾಯಿದೆಯಡಿ ನೊಂದಾಯಿತ ಹೆಸರಾಂತ ಟಿಂಬರ್ ವ್ಯಾಪಾರಸ್ಥರು/ಸರಬರಾಜುದಾರರು/ ಇವರಿಂದ ಮೊಹರಾದ ಟೆಂಡರ್‌ಗಳನ್ನು ಆಹ್ವಾನಿಸಲಾಗಿದೆ.

| | |
|---|---|
| ಟೆಂಡರ್ ಫಾರಂಗಳನ್ನು ಒದಗಿಸುವ ದಿನಾಂಕ | 25.09.2008 ರಿಂದ |
| ಟೆಂಡರ್ ಫಾರಂಗಳನ್ನು ಒದಗಿಸಲು ಕಡೆಯ ದಿನಾಂಕ | 17.10.2008 ರಂದು ಮದ್ಯಾಹ್ನ 1.30 ಘಂಟೆವರೆಗೆ. |
| ಟೆಂಡರ್ ಸ್ವೀಕರಿಸಲು ಕಡೆಯ ದಿನಾಂಕ | 17.10.2008 ರಂದು ಮದ್ಯಾಹ್ನ 3.00 ಘಂಟೆವರೆಗೆ. |
| ಟೆಂಡರ್‌ಗಳನ್ನು ತೆರೆಯುವ ದಿನಾಂಕ | 17.10.2008 ರಂದು ಸಂಜೆ 4.00 ಘಂಟೆಗೆ. |

ಹೆಚ್ಚಿನ ವಿವರಗಳನ್ನು ಮತ್ತು ಟೆಂಡರ್ ಫಾರಂಗಳನ್ನು ಮೇಲಿನ ಕಛೇರಿಯಿಂದ ಕೆಲಸದ ವೇಳೆಯಲ್ಲಿ ಪಡೆಯಬಹುದು.

ಉಪ ಅರಣ್ಯ ಸಂರಕ್ಷಣಾಧಿಕಾರಿಗಳು
ಮತ್ತು ಪ್ರಾದೇಶಿಕ ವ್ಯವಸ್ಥಾಪಕರು

ಪಿ.ಡಿ. 98

## ಕರ್ನಾಟಕ ಮೃಗಾಲಯ ಪ್ರಾಧಿಕಾರ

**ಕಾರ್ಯನಿರ್ವಾಹಕ ನಿರ್ದೇಶಕರ ಕಛೇರಿ, ಬನ್ನೇರುಘಟ್ಟ ಬಯಲಾಜಿಕಲ್ ಪಾರ್ಕ್, ಬೆಂಗಳೂರು – 83**

### ಅನುಪಯುಕ್ತ ವಸ್ತುಗಳ ಟೆಂಡರ್ ಹಾಗೂ ಹರಾಜು ಮಾರಾಟ ಪ್ರಕಟಣೆ

**ಸಂಖ್ಯೆ: ಎ1–ಬಬಪಾ–ಅನುಪಯುಕ್ತ ವಸ್ತುಗಳು–ಸಿಆರ್–1/2008–09, ದಿನಾಂಕ: 25ನೇ ಸೆಪ್ಟೆಂಬರ್ 2008**

ಈ ಮೂಲಕ ಸಾರ್ವಜನಿಕರಿಗೆ ತಿಳಿಯಪಡಿಸುವುದೇನೆಂದರೆ, ಈ ಕೆಳಕಂಡ ವಸ್ತುಗಳನ್ನು 'ಎಲ್ಲಿ ಹೇಗಿವೆಯೋ ಹಾಗೆ ಆಧಾರದ ಮೇಲೆ" ಟೆಂಡರ್ ಹಾಗೂ ಹರಾಜು ಮಾರಾಟ ಮಾಡಲಾಗುವುದೆಂದು ಈ ಮೂಲಕ ತಿಳಿಸಿದೆ.

ಸದರಿ ಟೆಂಡರಿನಲ್ಲಿ ಭಾಗವಹಿಸುವವರು ಟೆಂಡರು ಅರ್ಜಿಯನ್ನು ರೂ. 100/– ಪಾವತಿಸಿ ದಿನಾಂಕ: 20.10.2008 ರಿಂದ 25.10.2008 ರ ಮಧ್ಯಾಹ್ನ 12.00 ಗಂಟೆಯವರೆಗೆ ಪಡೆಯಬಹುದು. ಮೊಹರು ಮಾಡಿದ ಲಕೋಟೆಯಲ್ಲಿ ದಿನಾಂಕ: 25.10.2008 ರಂದು ಮಧ್ಯಾಹ್ನ 2.00 ಗಂಟೆ ಒಳಗಾಗಿ ಈ ಕೆಳ ಸಹಿ ಮಾಡಿರುವವರ ಕಛೇರಿಯಲ್ಲಿ ಸಲ್ಲಿಸಲು ತಿಳಿಸಿದೆ. ಹರಾಜು 25.10.2008 ರಂದು ಮಧ್ಯಾಹ್ನ 3.00 ಗಂಟೆಗೆ ನಡೆಯಲಿದ್ದು, ಹರಾಜಿನ ನಂತರ ಟೆಂಡರ್ ತೆರೆಯಲಾಗುವುದು.

**ವಸ್ತುಗಳ ವಿವರ**

| | | | |
|---|---|---|---|
| 1. | ಕಬ್ಬಿಣದ ಗೇಟ್‌ಗಳು (ಸಫಾರಿ ವಲಯ) | – | 14200 ಕೆಜಿ |
| 2. | ಕಬ್ಬಿಣದ ಗೇಟ್‌ಗಳು (ಜೂ ವಲಯ) | – | 350 ಕೆಜಿ |
| 3. | ಹಳೆಯ ಚೈನ್‌ಲಿಂಕ್ ಮೆಷ್ (ಜೂ ವಲಯ) | – | 425 ಕೆಜಿ |
| 4. | ಚೈನ್‌ಲಿಂಕ್ ಮೆಷ್ | – | 150 ಕೆಜಿ |
| 5. | ನಿರುಪಯುಕ್ತ ಮೆಷ್ (ಪುನರ್ವಸತಿ ಕೇಂದ್ರ) | – | 100 ಕೆಜಿ |

| | | | |
|---|---|---|---|
| 6. | ಕಬ್ಬಿಣದ ಬಕೆಟ್ | – | 150 ಕೆಜಿ |
| 7. | ಕಬ್ಬಿಣದ ಸ್ಟ್ಯಾಂಡ್ | – | 100 ಕೆಜಿ |
| 8. | ರೋಲಿಂಗ್ ಸೆಟ್ | – | 200 ಕೆಜಿ |
| 9. | ಕಬ್ಬಿಣದ ಸರಳುಗಳಿಂದ ಮಾಡಿರುವ ಕೇಜ್ | – | 1325 ಕೆಜಿ |
| 10. | ಪ್ಲೈವುಡ್ ಶೀಟ್‌ಗಳಿಂದ ಮಾಡಿರುವ ಕೇಜ್ | – | 225 ಕೆಜಿ |
| 11. | ಮರದ ಹಲಗೆ ಮತ್ತು ಕಬ್ಬಿಣಗಳಿಂದ ಮಾಡಿರುವ ಕೇಜ್ | – | 475 ಕೆಜಿ |
| 12. | ಕೋಲ್ಯಪ್ಸಿಬಲ್ ಗೇಟ್ (ಮಡಿಸು ಗೇಟು) | – | 350 ಕೆಜಿ |
| 13. | ಹೈ ಭೀಮ್ 'ಯೂ' ಚಾನಲ್‌ಗಳು | – | 400 ಕೆಜಿ |

**ಷರತ್ತುಗಳು:–**

1. ತೋರಿಸಿರುವ ಪ್ರಮಾಣವು ಅಂದಾಜು ಪ್ರಮಾಣವಾಗಿದ್ದು, ಹರಾಜು/ಟೆಂಡರಿನಲ್ಲಿ ಭಾಗವಹಿಸುವವರು ಹರಾಜು ನಿಗದಿಪಡಿಸಿದ ದಿನಕ್ಕಿಂತ ಮೊದಲು ವಸ್ತುಗಳನ್ನು ಪರೀಕ್ಷಿಸಬಹುದು.
2. ಟೆಂಡರ್ ಹಾಗೂ ಹರಾಜಿಗೆ ಪ್ರತ್ಯೇಕ ಇಎಂಡಿ ಕಟ್ಟತಕ್ಕದ್ದು, ಹರಾಜಿನಲ್ಲಿ ಭಾಗವಹಿಸುವರು ರೂ 5,000/– (ರೂ. ಐದು ಸಾವಿರ ಮಾತ್ರ) ಹಾಗೂ ಟೆಂಡರ್‌ನಲ್ಲಿ ಭಾಗವಹಿಸುವರು ರೂ 1,000/– (ರೂ. ಒಂದು ಸಾವಿರ ಮಾತ್ರ) ಅನ್ನು ಠೇವಣಿಯಾಗಿ ಬ್ಯಾಂಕ್ ಡಿಮ್ಯಾಂಡ್ ಡ್ರಾಫ್ಟ್ ರೂಪದಲ್ಲಿ ಟೆಂಡರಿನೊಂದಿಗೆ ಈ ಕೆಳ ಸಹಿದಾರರ ಪದನಾಮದ ಹೆಸರಿನಲ್ಲಿ ಸಲ್ಲಿಸತಕ್ಕದ್ದು.
3. ಟೆಂಡರ್–ಕಂ–ಹರಾಜಿನಲ್ಲಿ ಜಯಶೀಲರಾದ ವ್ಯಕ್ತಿಗಳು ಪೂರ್ಣ ಹಣವನ್ನು (ತೆರಿಗೆ ಸೇರಿ) ಹರಾಜು ಮುಗಿದ ಕೂಡಲೇ ಪಾವತಿ ಮಾಡತಕ್ಕದ್ದು ತಪ್ಪಿದಲ್ಲಿ ಇಎಂಡಿ ಯನ್ನು ಮುಟ್ಟುಗೋಲು ಹಾಕಲಾಗುವುದು.
4. ಬೆಲೆಯನ್ನು ಪ್ರತಿ ಕೆಜಿಗೆ ಫಾರಂನಲ್ಲಿ ನಮೂದಿಸತಕ್ಕದ್ದು.
5. ಬಿಡ್ಡನ್ನು ಅಂಗೀಕರಿಸುವ ಅಥವಾ ತಿರಸ್ಕರಿಸುವ ಎಲ್ಲಾ ಅಧಿಕಾರ ಈ ಕೆಳ ಸಹಿದಾರರಿಗಿದ್ದು ಅವರ ತೀರ್ಮಾನವೇ ಅಂತಿಮ ತೀರ್ಮಾನವಾಗಿರುತ್ತದೆ.
6. ಹೆಚ್ಚಿನ ವಿವರಗಳನ್ನು ಈ ಕಛೇರಿಯ ಕೆಲಸದ ವೇಳೆಯಲ್ಲಿ ಪಡೆಯುವುದು.

ಕಾರ್ಯನಿರ್ವಾಹಕ ನಿರ್ದೇಶಕರು
ಬನ್ನೇರುಘಟ್ಟ ಬಯಲಾಜಿಕಲ್ ಪಾರ್ಕ್
ಬೆಂಗಳೂರು

**Office of the Executive Director & Conservator of Forests, Bannerghatta Biological Park, Bangalore - 83**

**No.A1/BBP/Scrap Materials/CR-1/2008-09, Dated: 25th September 2008**

**NOTIFICATION FOR TENDER CUM AUCTION OF SCRAP MATERIALS**

It is informed to the general public that the Tender cum Auction of the following materials on as-is-where basis will be held on 25.10.2008 by the undersigned or the officer authorized. The blank tender forms can be obtained on payment of Rs. 100/- from this office from 20.10.2008 to till 12:00 noon of 25.10.2008. The last date for receipt sealed tenders is up to 2:00 PM on 25.10.2008. Auction of the materials will take place on 25.10.2008 at 3:00 PM. Soon after the auction, the tenders will be opened. The EMD of Rs. 5,000/- in form of DD in the name of the Executive Director, Bannerghatta Biological Park, Bangalore-83 to be deposited before participating in the auction. Those who want to participate in the tender has to enclose Rs. 1,000/- DD in the name of the Executive Director, Bannerghatta Biological Park, Bangalore-83. Separate tender form should be submitted for each lot.

The details of the materials: (Approx qty)

| | | | |
|---|---|---|---|
| 1. | Used Iron gates at Safari | - | 1420 Kgs. |
| 2. | Iron Gate at zoo | - | 350 Kgs |
| 3. | Old Chain link mesh gate at zoo premises | - | 275 Kgs |
| 4. | Chain link mesh | - | 150 Kgs. |
| 5. | Un serviceable mesh (R.C) | - | 100 Kgs. |
| 6. | Iron buckets | - | 150 Kgs. |

| | | | |
|---|---|---|---|
| 7. | Iron Stands | - | 100 Kgs. |
| 8. | Rolling set | - | 200 Kgs. |
| 9. | Cages prepared with iron mess | - | 1325 Kgs. |
| 10. | Cages prepared with plywood | - | 225 Kgs. |
| 11. | Cages prepared with wood & iron | - | 250 Kgs |
| 12. | Collapsible gate | - | 350 Kgs. |
| 13. | High beam 'U' Channels | - | 400 Kgs. |

**TERMS AND CONDITIONS:**

1. The quantity shown above is only approximate and the participants are advised to physically verify the quality & quantity of materials before participating. No claim of what so ever will be entertained after the tender/auction.

2. The successful tenderer should deposit full amount plus taxes as applicable immediately after the sale failing which the EMD will be forfeited.

3. Rate should be quoted per kg in the form.

4. Any other conditions can be added before the auction.

5. The Executive Director, Bannerghatta Biological Park, Bangalore-83 has the right to accept or reject the rate received in auction or tender without assigning any reasons and his decision is final.

Further clarification if any can be obtained from this office.

Executive Director &
Conservator of Forests,
Bannerghatta Biological Park, Bangalore - 83.

P.D. 99

**DEPARTMENT OF AGRICULTURE**

**TENDER BULLETIN**

**No. AHD 01 AMS 2008, Dated: 20th September 2008**

Following Tender Notification is published as a part of the Tender Bulletin during Fourth week of September 2008.

Deputy Secretary & State Tender Bulletin Officer
Agriculture Department, M.S. Building 4th Floor,
III Stage, Ambedkar Veedhi, Bangalore-1.

**ಕೃಷಿ ಇಲಾಖೆ**

**ಕೃಷಿ ಆಯುಕ್ತರ ಕಾರ್ಯಾಲಯ, ಶೇಷಾದ್ರಿ ರಸ್ತೆ, ಬೆಂಗಳೂರು–560 001.**

**ಟೆಂಡರ್ ಪ್ರಕಟಣೆ**

**ಸಂಖ್ಯೆ: ಕಾಸಂಘ: ಸಂ. 1 :ಟೆಂಡರ್ : 2008–09, ದಿನಾಂಕ: 16ನೇ ಸೆಪ್ಟೆಂಬರ್ 2008**

ಬೆಂಗಳೂರು ನಗರ ಪಾಲಿಕೆಯ ವ್ಯಾಪ್ತಿಯೊಳಗೆ ಕರ್ನಾಟಕ ರಾಜ್ಯ ಕೃಷಿ ಇಲಾಖೆಗೆ (ಎರಡು ವರ್ಷದ ಅವಧಿಗೆ) ಉಪಹಾರ/ಪೇಯಗಳನ್ನು (ಕಾಫಿ/ಟೀ) ಸರಬರಾಜು ಮಾಡಲು ಮೊಹರಾದ ಟೆಂಡರ್‌ಗಳನ್ನು ಈ ಟೆಂಡರ್ ಪ್ರಕಟಣೆಗೆ ಲಗತ್ತಿಸಿರುವ ಷೆಡ್ಯೂಲ್–1 ರಲ್ಲಿ ವಿವರಿಸಿರುವ ಷರತ್ತುಗಳು ಮತ್ತು ಕರಾರಿನಂತೆ, ಷೆಡ್ಯೂಲ್–2 ರಲ್ಲಿ ವಿವರಿಸಿರುವ ಕೆಲಸಕ್ಕೆ ಸಂಬಂಧಿಸಿದಂತೆ ಪರವಾನಿಗೆ ಹೊಂದಿರುವ ಹೋಟೇಲ್ ಕ್ಯಾಟರಿಂಗ್ ವೆಂಡರ್ಸ್‌ಗಳಿಂದ ಎರಡು ವರ್ಷಗಳ ಅವಧಿಗೆ ಆಹ್ವಾನಿಸಲಾಗಿದೆ. ಖಾಲಿ ಟೆಂಡರ್ ಅರ್ಜಿ ಮತ್ತು ಇತರೆ ವಿವರಗಳನ್ನು ಕೃಷಿ ನಿರ್ದೇಶನಾಲಯ, ಶೇಷಾದ್ರಿ ರಸ್ತೆ, ಬೆಂಗಳೂರು–560001 ಈ ವಿಳಾಸದಲ್ಲಿ ಕೆಲಸದ ದಿನಗಳಲ್ಲಿ ರೂ. 50.00 ಮತ್ತು ಅದಕ್ಕೆ ವ್ಯಾಟ್ 12.5% ಅನ್ವಯಿಸುವ ಹಣವನ್ನು ಪಾವತಿ ಮಾಡಿ ದಿನಾಂಕ: 22.09.2008 ರಿಂದ 21.10.2008 ವರೆಗೆ ಪಡೆಯಬಹುದು.

ಟೆಂಡರ್‌ಗಳನ್ನು ಸ್ವೀಕರಿಸಲು ಕೊನೆಯ ದಿನಾಂಕ: 23.10.2008ರ ಅಪರಾಹ್ನ 3.00 ಗಂಟೆಗೆ ನಿಗದಿಯಾಗಿರುತ್ತದೆ. ಟೆಂಡರ್‌ಗಳನ್ನು ದ್ವಿಪ್ರತಿಗಳಲ್ಲಿ ಸಲ್ಲಿಸಬೇಕು. ಟೆಂಡರ್ ಜೊತೆಯಲ್ಲಿ ರೂ. 1000.00 ಮೊತ್ತದ ಭದ್ರತಾ ಠೇವಣಿಯನ್ನು ಕೃಷಿ ನಿರ್ದೇಶಕರ ಹೆಸರಿನಲ್ಲಿ ಡಿಮ್ಯಾಂಡ್ ಡ್ರಾಫ್ಟ್ ಪಡೆದು ಸಲ್ಲಿಸಬೇಕು. ಇಲಾಖೆಯ ದರ ಕರಾರು ಸಮಿತಿ ಅದೇ ದಿನ ಸಂಜೆ 4.00 ಗಂಟೆಗೆ ಇಲ್ಲವೆ ಸಂಬಂಧಪಟ್ಟ ಅಧಿಕಾರಿಯ ಮುಂದೆ ನಿಗದಿಪಡಿಸುವ ದಿವಸ ಹಾಗೂ ಸಮಯಕ್ಕೆ ಟೆಂಡರುಗಳನ್ನು ಆ ಸಮಯದಲ್ಲಿ ಹಾಜರಿರುವಂತಹ ಟೆಂಡರುದಾರರ ಸಮ್ಮುಖದಲ್ಲಿ ತೆರೆಯಲಾಗುವುದು. ಮೊಹರಾದ ಟೆಂಡರ್ ಲಕೋಟೆಯ

ಮೇಲೆ "ಕೃಷಿ ಇಲಾಖೆಗೆ ಲಘು ಉಪಹಾರ ಸರಬರಾಜು ಮಾಡಲು ಟೆಂಡರ್" ಎಂದು ಹಾಗೂ ಟೆಂಡರ್ ಪ್ರಕಟಣೆಯ ಸಂಖ್ಯೆಯನ್ನು ನಮೂದಿಸತಕ್ಕದ್ದು.

ಕೃಷಿ ನಿರ್ದೇಶಕರು

**DEPARTMENT OF AGRICULTURE**

**TENDER BULLETIN**

**No. AHD 01 AMS 2008, Dated: 20th September 2008**

Following Tender Notification is published as a part of the Tender Bulletin during Fourth week of September 2008.

Deputy Secretary & State Tender Bulletin Officer
Agriculture Department, M.S. Building 4th Floor,
III Stage, Ambedkar Veedhi, Bangalore-1.

**DEPARTMENT OF AGRICULTURE**

**Commissionerate of Agriculture, Seshadri Road, Bangalore 560 001**

**TENDER NOTIFICATION**

**No. Ka.Sanga/Samparka 1/Tender 2008-09, Dated: 16th September 2008**

Sealed Tenders are invited from the Hotel Proprietors/Catering venders in Bangalore Metropolitan area for the supply of food /coffee /tea for a period of two years. Blank tender form and other details can be obtained from the Directorate of Agriculture (P.M.C) Sheshadri Road, Bangalore 560001 on payment of Rs.50.00 and applicable sales tax and surcharge on all working days from 22.09.2008 to 21.10.2008.

The last date for receiving duly filled in tenders is 23.10.2008 up to 3.00 PM. The tender should accompany Demand Draft for Rs.1000/- towards the Security Deposit. This will be opened on the same day at 4.00 PM or on the next future date and time as fixed by the concerned authority in presence of the tender applicants present at that time.

P.R. 505 Director of Agriculture

**ಆಯುಕ್ತರವರ ಕಛೇರಿ, ಪಶುಪಾಲನಾ ಮತ್ತು ಪಶುವೈದ್ಯ ಸೇವಾ ಇಲಾಖೆ, ಬೆಂಗಳೂರು**

**ಅಧಿಸೂಚನೆ**

**ಸಂ:ಆಪಸಂ:ಉಗ್ರಾಣ:ವಿವ–7:2006–07, ದಿನಾಂಕ: 25ನೇ ಸೆಪ್ಟೆಂಬರ್ 2008**

**ವಿಷಯ:** ಅಂಬಾಸಿಡರ್ ವಾಹನವನ್ನು ಟೆಂಡರ್ ಕಂ ಬಹಿರಂಗ ಹರಾಜು ಮೂಲಕ ವಿಲೇವಾರಿ ಮಾಡುವ ಬಗ್ಗೆ.

**ಉಲ್ಲೇಖ:**
1. ಸರ್ಕಾರದ ಆದೇಶ ಸಂಖ್ಯೆ:ಸಿಆಸುಇ:142:ಶಿವಾನಿ:2000 ದಿನಾಂಕ:5.1.2001.
2. ಸರ್ಕಾರದ ಸುತ್ತೋಲೆ ಸಂಖ್ಯೆ :ಸಿಆಸುಇ:142:ಶಿವಾನಿ:2006 ದಿನಾಂಕ:20.5.2006.
3. ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ಬೆಂಗಳೂರು (ಕೇಂದ್ರ) ಇವರ ಪತ್ರ ಸಂಖ್ಯೆ:ಪ್ರಾಸಾಅ: ಬೆಂಕೇ:ವಾಪವ:2007–08 ದಿನಾಂಕ:15.2.2008.

ಈ ಮೂಲಕ ಸಾರ್ವಜನಿಕ ಗಮನಕ್ಕೆ ತರಬಯಸುವುದೇನೆಂದರೆ, ಆಯುಕ್ತರು, ಪಶುಪಾಲನಾ ಮತ್ತು ಪಶುವೈದ್ಯ ಸೇವಾ ಇಲಾಖೆ, ವಿಶ್ವೇಶ್ವರಯ್ಯ ಚಿಕ್ಕಗೋಪುರ, ಬೆಂಗಳೂರು ರ್‍ಯಾಪ್‌ನಲ್ಲಿ ಯಥಾ ಸ್ಥಿತಿಯಲ್ಲಿರುವ ಕೆಳಕಂಡ ನಿರುಪಯುಕ್ತ ವಾಹನವನ್ನು ಟೆಂಡರ್ ಕಂ ಬಹಿರಂಗ ಹರಾಜು (Tender cum Auction) ಮೂಲಕ ದಿನಾಂಕ:05.11.2008 ಬೆಳಿಗ್ಗೆ 11.00 ಗಂಟೆಗೆ ಜಂಟಿ ನಿರ್ದೇಶಕರು (ವಿಸ್ತರಣೆ ಮತ್ತು ತರಬೇತಿ), ಆಯುಕ್ತರ ಕಛೇರಿ, ಪಶುಪಾಲನಾ ಮತ್ತು ಪಶುವೈದ್ಯ ಸೇವಾ ಇಲಾಖೆ, ಬೆಂಗಳೂರು ಇವರ ಸಮೂಹದಲ್ಲಿ ವಿಲೇವಾರಿ ಮಾಡಲಾಗುವುದು. ಇಚ್ಛೆಯುಳ್ಳವರು ನಿಗಧಿಪಡಿಸಿದ ಠೇವಣಿ ಹಣ ರೂ.5000/– (ರೂಪಾಯಿ ಐದು ಸಾವಿರಗಳು ಮಾತ್ರ) ಡಿ.ಡಿ. ಮೂಲಕ ಮುಂಗಡವಾಗಿಟ್ಟು ಇಲಾಖೆಯು ವಿಧಿಸುವ ಷರತ್ತುಗಳಿಗನುಗುಣವಾಗಿ ಹರಾಜಿನಲ್ಲಿ ಭಾಗವಹಿಸಬಹುದು.

| ಕ್ರ. ಸಂ. | ವಾಹನದ ವಿವರ | ನೊಂದಣಿ ಸಂಖ್ಯೆ | ಮಾದರಿ | ಖರೀದಿಸಿದ ವರ್ಷ |
|---|---|---|---|---|
| 1) | ಅಂಬಾಸಿಡರ್ | ಸಿಎಜಿ–1644 | 1984 ಅಂಬಾಸಿಡರ್ | 1984 |

**ಹರಾಜಿನ ಷರತ್ತು ಮತ್ತು ನಿಬಂಧನೆಗಳು**

1) ಆಯುಕ್ತಾಲಯದಲ್ಲಿ ನಿಗಧಿಪಡಿಸಿರುವ ಖಾಲಿ ಟೆಂಡರ್ ನಮೂನೆಗಳನ್ನು ರೂ.500/– + 12.5% ತೆರಿಗೆ ಸಹಿತ ನಗದು ರೂಪದಲ್ಲಿ ಮಾತ್ರ ಆಯುಕ್ತರು, ಪಶುಪಾಲನಾ ಮತ್ತು ಪಶುವೈದ್ಯ ಸೇವಾ ಇಲಾಖೆ, ಬೆಂಗಳೂರು ಇವರ

ಹೆಸರಿಗೆ ಸಂದಾಯ ಮಾಡಿ ದಿನಾಂಕ:20.10.2008 ರಿಂದ 25.10.2008ರ ವರೆಗೆ ಅರ್ಜಿಯನ್ನು ಪಡೆಯಬಹುದು.

2) ಭರ್ತಿ ಮಾಡಿದ ಟೆಂಡರ್‌ಗಳನ್ನು ಮೊಹರು ಮಾಡಿದ ಲಕೋಟೆಯಲ್ಲಿ ನಿಗದಿಪಡಿಸಿರುವ ಠೇವಣಿಯೊಂದಿಗೆ ಹಾಗೂ ಸಲ್ಲಿಸಲು ನಿಗಧಿಪಡಿಸಿರುವ ಕೊನೆಯ ದಿನಾಂಕ:04.11.2008 ಹಾಗೂ ಸಮಯ 5.00 ಗಂಟೆ ಸಂಜೆ ಇದಕ್ಕಾಗಿ ಟೆಂಡರ್ ಪೆಟ್ಟಿಯೊಳಗೆ ಹಾಕತಕ್ಕದ್ದು, ಬಹಿರಂಗ ಹರಾಜಿನಲ್ಲಿ ಭಾಗವಹಿಸುವವರು ಠೇವಣಿ ಸಂದಾಯ ಮಾಡಿದ ವ್ಯಕ್ತಿಯೇ ಬಿಡ್ಡು ಕೂಗಲು ಭಾಗವಹಿಸತಕ್ಕದ್ದು.

3) ಬಹಿರಂಗ ಹರಾಜಿನ ದಿನದಂದು ಆ ಸ್ಥಳದಲ್ಲಿಯೇ ಟೆಂಡರನ್ನು ತೆರೆಯಲಾಗುವುದು. ಟೆಂಡರ್‌ನಲ್ಲಿ ಯಾವ ಟೆಂಡರ್‌ದಾರರು ಹೆಚ್ಚು ಮೊತ್ತವನ್ನು ನಮೂದಿಸಿರುತ್ತಾರೋ ಅವರನ್ನು ಯಶಸ್ವಿ ಟೆಂಡರ್‌ರೆಂದು ಪರಿಗಣಿಸಲಾಗುವುದು.

4) ಬಹಿರಂಗ ಹರಾಜಿನಲ್ಲಿ ಯಶಸ್ವಿ ಬಿಡ್ಡುದಾರರು ಮತ್ತು ಟೆಂಡರ್ ಪ್ರಕ್ರಿಯೆಯಲ್ಲಿ ಯಶಸ್ವಿ ಟೆಂಡರ್‌ದಾರರು ಇವರಿಬ್ಬರಲ್ಲಿ ಯಾರು ವಾಹನಕ್ಕೆ ಹೆಚ್ಚು ಬೆಲೆಯನ್ನು ಪಾವತಿ ಮಾಡಲು ಅರ್ಹರಾಗುತ್ತಾರೋ ಅವರನ್ನು ಪೂರ್ಣ ಯಶಸ್ವಿ ಬಿಡ್ಡುದಾರರೆಂದು ಪರಿಗಣಿಸಿ ಅವರಿಗೆ ವಾಹನವನ್ನು ವಿಲೇವಾರಿ ಮಾಡಲಾಗುವುದು.

5) ಯಶಸ್ವಿ ಬಿಡ್ಡುದಾರರು ಸ್ಥಳದಲ್ಲಿಯೇ ವಾಹನದ ಬಿಡ್ಡಿನ ಮೊತ್ತದ ಶೇ.50 ರಷ್ಟು ಮತ್ತು ಮೊತ್ತದ ಶೇ.12.5 ರಷ್ಟು ತೆರಿಗೆಯೊಂದಿಗೆ ನಗದು ರೂಪದಲ್ಲಿ ಪಾವತಿಸತಕ್ಕದ್ದು. ತಪ್ಪಿದಲ್ಲಿ ಠೇವಣಿ ಮೊಬಲಗನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗುವುದು. ಬಹಿರಂಗ ಹರಾಜಿನಲ್ಲಿ ಅತೀ ಹೆಚ್ಚಿನ ಬಿಡ್ಡುದಾರರ ಮಂಜೂರಾತಿಯನ್ನು ಜಂಟಿ ನಿರ್ದೇಶಕರು (ವಿಸ್ತರಣೆ), ಆಯುಕ್ತರ ಕಛೇರಿ, ಪಶುಪಾಲನಾ ಮತ್ತು ಪಶುವೈದ್ಯ ಸೇವಾ ಇಲಾಖೆ, ಬೆಂಗಳೂರು ರವರಿಗೆ ಯಶಸ್ವಿ ಬಿಡ್ಡುದಾರರು ಬಾಕಿ ಉಳಿದಿರುವ ಮೊತ್ತವನ್ನು ಶೇ.12.5 ರಷ್ಟು ತೆರಿಗೆ ಸಹಿತ ಸಂದಾಯ ಮಾಡಿ ವಾಹನವನ್ನು ವಿಳಂಬಮಾಡದೆ 5 ದಿನಗಳ ಅವಧಿಯಲ್ಲಿ ತೆಗೆದುಕೊಂಡು ಹೋಗತಕ್ಕದ್ದು. ತಪ್ಪಿದಲ್ಲಿ ಬಿಡ್ಡುದಾರರು ತುಂಬಿರುವ ಪೂರ್ಣ ಹಣವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದಲ್ಲದೇ ಅದುವರೆವಿಗೂ ನಡೆದ ಬಹಿರಂಗ ಹರಾಜು ಕಂ ಟೆಂಡರ್ ಪ್ರಕ್ರಿಯೆಯನ್ನು ನಿರಸನಗೊಳಿಸಲಾಗುವುದು. ಇತರೆ ತೆರಿಗೆಗಳ ಪಾವತಿ ಯಶಸ್ವಿ ಬಿಡ್ಡುದಾರರ ಜವಾಬ್ದಾರಿಯಾಗಿರುತ್ತದೆ.

ಆಯುಕ್ತರು

**ಆಯುಕ್ತರವರ ಕಛೇರಿ, ಪಶುಪಾಲನಾ ಮತ್ತು ಪಶುವೈದ್ಯ ಸೇವಾ ಇಲಾಖೆ, ಬೆಂಗಳೂರು**

**ಅಧಿಸೂಚನೆ**

**ಸಂ:ಆಪಸಂ:ಉಗ್ರಾಣ:ವಿವ–12:2006–07, ದಿನಾಂಕ: 25ನೇ ಸೆಪ್ಟೆಂಬರ್ 2008**

**ವಿಷಯ:** ಸ್ಟಾಂಡರ್ಡ್ 20 ವಾಹನವನ್ನು ಟೆಂಡರ್ ಕಂ ಬಹಿರಂಗ ಹರಾಜು ಮೂಲಕ ವಿಲೇವಾರಿ ಮಾಡುವ ಬಗ್ಗೆ.

**ಉಲ್ಲೇಖ:**
1. ಸರ್ಕಾರದ ಆದೇಶ ಸಂಖ್ಯೆ:ಸಿಆಸುಇ:142:ಶಿವಾನಿ:2000 ದಿನಾಂಕ:5.1.2001.
2. ಸರ್ಕಾರದ ಸುತ್ತೋಲೆ ಸಂಖ್ಯೆ :ಸಿಆಸುಇ:142:ಶಿವಾನಿ:2006 ದಿನಾಂಕ:20.5.2006.
3. ಉಪ ನಿರ್ದೇಶಕರು, ಪಶುಪಾಲನಾ ಮತ್ತು ಪಶುವೈದ್ಯ ಸೇವಾ ಇಲಾಖೆ, ದೊಡ್ಡರೋಗ ನಿವಾರಣಾ ಯೋಜನೆ, ಹೆಬ್ಬಾಳ, ಬೆಂಗಳೂರು ಇವರ ಪತ್ರ ಸಂಖ್ಯೆ:ಉನಿ:ದೋ:ಸಿ–4:ವಾಹನ: ವಿಲೇವಾರಿ:2007–08 ದಿನಾಂಕ:16.5.2007.

ಈ ಮೂಲಕ ಸಾರ್ವಜನಿಕ ಗಮನಕ್ಕೆ ತರಬಯಸುವುದೇನೆಂದರೆ, ಸಹಾಯಕ ನಿರ್ದೇಶಕರು, ದೊಡ್ಡರೋಗ ಜಾಗೃತ ಘಟಕ, ಪಶುಪಾಲನಾ ಮತ್ತು ಪಶುವೈದ್ಯ ಸೇವಾ ಇಲಾಖೆ, ಬೀದರ್ ಈ ಕಛೇರಿಯ ಮುಂಭಾಗದಲ್ಲಿ ಯಥಾ ಸ್ಥಿತಿಯಲ್ಲಿರುವ ಕೆಳಕಂಡ ನಿರುಪಯುಕ್ತ ವಾಹನವನ್ನು ಟೆಂಡರ್ ಕಂ ಬಹಿರಂಗ ಹರಾಜು (Tender cum Auction) ಮೂಲಕ ದಿನಾಂಕ:05.11.2008 ಬೆಳಿಗ್ಗೆ 11.00 ಗಂಟೆಗೆ ಜಂಟಿ ನಿರ್ದೇಶಕರು (ಕ್ಷೇತ್ರ), ಆಯುಕ್ತರ ಕಛೇರಿ, ಪಶುಪಾಲನಾ ಮತ್ತು ಪಶುವೈದ್ಯ ಸೇವಾ ಇಲಾಖೆ, ಬೆಂಗಳೂರು ಇವರ ಸಮೂಹದಲ್ಲಿ ವಿಲೇವಾರಿ ಮಾಡಲಾಗುವುದು. ಇಚ್ಛೆಯುಳ್ಳವರು ನಿಗಧಿಪಡಿಸಿದ ಠೇವಣಿ ಹಣ ರೂ.5000/– (ರೂಪಾಯಿ ಐದು ಸಾವಿರಗಳು ಮಾತ್ರ) ಡಿ.ಡಿ. ಮೂಲಕ ಮುಂಗಡವಾಗಿಟ್ಟು ಇಲಾಖೆಯು ವಿಧಿಸುವ ಷರತ್ತುಗಳಿಗನುಗುಣವಾಗಿ ಹರಾಜಿನಲ್ಲಿ ಭಾಗವಹಿಸಬಹುದು.

| ಕ್ರ. ಸಂ. | ವಾಹನದ ವಿವರ | ನೊಂದಣಿ ಸಂಖ್ಯೆ | ಮಾದರಿ | ಖರೀದಿಸಿದ ವರ್ಷ |
|---|---|---|---|---|
| 1) | ಸ್ಟಾಂಡರ್ಡ್ – 20 | ಎಂ.ಇ.ಇ. 2966 | 1976 ಸ್ಟಾಂಡರ್ಡ್ – 20 | 1976 |

**ಹರಾಜಿನ ಷರತ್ತು ಮತ್ತು ನಿಬಂಧನೆಗಳು**

1) ಖಾಲಿ ಟೆಂಡರ್ ನಮೂನೆಗಳನ್ನು ರೂ.500/– + 12.5% ತೆರಿಗೆ ಸಹಿತ ನಗದು ರೂಪದಲ್ಲಿ ಮಾತ್ರ ಸಹಾಯಕ ನಿರ್ದೇಶಕರು, ದೊಡ್ಡರೋಗ ಜಾಗೃತ ಘಟಕ, ಪಶುಪಾಲನಾ ಮತ್ತು ಪಶುವೈದ್ಯ ಸೇವಾ ಇಲಾಖೆ, ಬೀದರ್

ಇವರ ಕಛೇರಿಯಲ್ಲಿ ಸಂದಾಯ ಮಾಡಿ ದಿನಾಂಕ:20.10.2008 ರಿಂದ 25.10.2008ರ ವರೆಗೆ ಅರ್ಜಿಯನ್ನು ಪಡೆಯಬಹುದು.

2) ಭರ್ತಿ ಮಾಡಿದ ಟೆಂಡರ್‌ಗಳನ್ನು ಮೊಹರು ಮಾಡಿದ ಲಕೋಟೆಯಲ್ಲಿ ನಿಗದಿಪಡಿಸಿರುವ ಠೇವಣಿಯೊಂದಿಗೆ ಹಾಗೂ ಸಲ್ಲಿಸಲು ನಿಗಧಿಪಡಿಸಿರುವ ಕೊನೆಯ ದಿನಾಂಕ:04.11.2008 ಹಾಗೂ ಸಮಯ 5.00 ಗಂಟೆ ಸಂಜೆ ಇದಕ್ಕಾಗಿ ಟೆಂಡರ್ ಪಟ್ಟಿಯೊಳಗೆ ಹಾಕತಕ್ಕದ್ದು, ಬಹಿರಂಗ ಹರಾಜಿನಲ್ಲಿ ಭಾಗವಹಿಸುವವರು ಠೇವಣಿ ಸಂದಾಯ ಮಾಡಿದ ವ್ಯಕ್ತಿಯೇ ಬಿಡ್ಡು ಕೂಗಲು ಭಾಗವಹಿಸತಕ್ಕದ್ದು.

3) ಬಹಿರಂಗ ಹರಾಜಿನ ದಿನದಂದು ಆ ಸ್ಥಳದಲ್ಲಿಯೇ ಟೆಂಡರನ್ನು ತೆರೆಯಲಾಗುವುದು. ಟೆಂಡರ್‌ನಲ್ಲಿ ಯಾವ ಟೆಂಡರ್‌ದಾರರು ಹೆಚ್ಚು ಮೊತ್ತವನ್ನು ನಮೂದಿಸಿರುತ್ತಾರೋ ಅವರನ್ನು ಯಶಸ್ವಿ ಟೆಂಡರ್‌ರೆಂದು ಪರಿಗಣಿಸಲಾಗುವುದು.

4) ಬಹಿರಂಗ ಹರಾಜಿನಲ್ಲಿ ಯಶಸ್ವಿ ಬಿಡ್ಡುದಾರರು ಮತ್ತು ಟೆಂಡರ್ ಪ್ರಕ್ರಿಯೆಯಲ್ಲಿ ಯಶಸ್ವಿ ಟೆಂಡರ್‌ದಾರರು ಇವರಿಬ್ಬರಲ್ಲಿ ಯಾರು ವಾಹನಕ್ಕೆ ಹೆಚ್ಚು ಬೆಲೆಯನ್ನು ಪಾವತಿ ಮಾಡಲು ಅರ್ಹರಾಗುತ್ತಾರೋ ಅವರನ್ನು ಪೂರ್ಣ ಯಶಸ್ವಿ ಬಿಡ್ಡುದಾರರೆಂದು ಪರಿಗಣಿಸಿ ಅವರಿಗೆ ವಾಹನವನ್ನು ವಿಲೇವಾರಿ ಮಾಡಲಾಗುವುದು.

5) ಯಶಸ್ವಿ ಬಿಡ್ಡುದಾರರು ಸ್ಥಳದಲ್ಲಿಯೇ ವಾಹನದ ಬಿಡ್ಡಿನ ಮೊತ್ತದ ಶೇ.50 ರಷ್ಟು ಮತ್ತು ಮೊತ್ತದ ಶೇ.12.5 ರಷ್ಟು ತೆರಿಗೆಯೊಂದಿಗೆ ನಗದು ರೂಪದಲ್ಲಿ ಪಾವತಿಸತಕ್ಕದ್ದು. ತಪ್ಪಿದಲ್ಲಿ ಠೇವಣಿ ಮೊಬಲಗನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗುವುದು. ಬಹಿರಂಗ ಹರಾಜಿನಲ್ಲಿ ಅತೀ ಹೆಚ್ಚಿನ ಬಿಡ್ಡುದಾರರ ಮಂಜೂರಾತಿಯನ್ನು ಜಂಟಿ ನಿರ್ದೇಶಕರು (ಕ್ಷೇತ್ರ), ಆಯುಕ್ತರ ಕಛೇರಿ, ಪಶುಪಾಲನಾ ಮತ್ತು ಪಶುವೈದ್ಯ ಸೇವಾ ಇಲಾಖೆ, ಬೆಂಗಳೂರು ರವರಿಗೆ ಯಶಸ್ವಿ ಬಿಡ್ಡುದಾರರು ಬಾಕಿ ಉಳಿದಿರುವ ಮೊತ್ತವನ್ನು ಶೇ.12.5 ರಷ್ಟು ತೆರಿಗೆ ಸಹಿತ ಸಂದಾಯ ಮಾಡಿ ವಾಹನವನ್ನು ವಿಳಂಬಮಾಡದೆ 5 ದಿನಗಳ ಅವಧಿಯಲ್ಲಿ ತೆಗೆದುಕೊಂಡು ಹೋಗತಕ್ಕದ್ದು. ತಪ್ಪಿದಲ್ಲಿ ಬಿಡ್ಡುದಾರರು ತುಂಬಿರುವ ಪೂರ್ಣ ಹಣವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದಲ್ಲದೇ ಅದುವರೆವಿಗೂ ನಡೆದ ಬಹಿರಂಗ ಹರಾಜು ಕಂ ಟೆಂಡರ್ ಪ್ರಕ್ರಿಯೆಯನ್ನು ನಿರಸನಗೊಳಿಸಲಾಗುವುದು. ಇತರೆ ತೆರಿಗೆಗಳ ಪಾವತಿ ಯಶಸ್ವಿ ಬಿಡ್ಡುದಾರರ ಜವಾಬ್ದಾರಿಯಾಗಿರುತ್ತದೆ.

ಪಿ.ಆರ್. 512 ಆಯುಕ್ತರು

## ಕಾರ್ಮಿಕ ಇಲಾಖೆ

### ಅಧಿಸೂಚನೆ

**ಸಂಖ್ಯೆ: ಕಾಇ 35 ಇಟಿಎಕ್ಸ್ 2006, ಬೆಂಗಳೂರು, ದಿನಾಂಕ: 17ನೇ ಜುಲೈ 2008**

ಕರ್ನಾಟಕ ಲೋಕಸೇವಾ ಆಯೋಗದ ಅಧಿಸೂಚನೆ ಸಂಖ್ಯೆ: E(1)41/2005-06/PSC, Bangalore, dated 4th May 2006 ರಲ್ಲಿ ಉದ್ಯೋಗಾಧಿಕಾರಿ ಹುದ್ದೆಗೆ ಆಯ್ಕೆಯಾಗಿರುವ 2005ನೇ ಪತ್ರಾಂಕಿತ ಪರೀಕ್ಷಾರ್ಥಿ ತಂಡದ ಶ್ರೀಮತಿ ಎಂ.ವಿ. ಸುಮಾ, # ಜಿ–2, ನಂ.123 (ಎಂ.ಎಸ್.ಮಾನ್‌ಷನ್), 4ನೇ ಅಡ್ಡರಸ್ತೆ, 3ನೇ ಮುಖ್ಯರಸ್ತೆ, ಬಿ.ಸಿ.ಸಿ. ಲೇಔಟ್ 1ನೇ ಹಂತ, ವಿಜಯನಗರ 2ನೇ ಹಂತ, ಬೆಂಗಳೂರು–560040 ರವರಿಗೆ ಇದೇ ಸಮಸಂಖ್ಯೆಯ ಅಧಿಸೂಚನೆ ದಿನಾಂಕ: 12.03.2006ರಲ್ಲಿ ನೇಮಿಸಲಾಗಿದ್ದು ಸದರಿ ಅಧಿಸೂಚನೆಯನ್ನು ಸದರಿಯವರು ಸ್ವೀಕರಿಸದಿರುವ ಕಾರಣ ಹಾಗೂ ಸದರಿ ಅಧಿಸೂಚನೆಯನ್ನು ಬಟವಾಡೆ ಮಾಡಲು ಕೈಗೊಂಡ ಎಲ್ಲ ಕ್ರಮಗಳು ವಿಫಲವಾದ ಹಿನ್ನೆಲೆಯಲ್ಲಿ ಸದರಿ ನೇಮಕಾತಿ ಅಧಿಸೂಚನೆಯನ್ನು ರದ್ದುಪಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ. ಭಾನುಮತಿ**

ಪಿ.ಆರ್. 515 ಪೀಠಾಧಿಕಾರಿ,

ಕಾರ್ಮಿಕ ಇಲಾಖೆ (ಉದ್ಯೋಗ ಮತ್ತು ತರಬೇತಿ)

## ಕೃಷಿ ಇಲಾಖೆ

### ಕೃಷಿ ಆಯುಕ್ತರ ಕಾರ್ಯಾಲಯ ಶೇಷಾದ್ರಿ ರಸ್ತೆ, ಬೆಂಗಳೂರು–01

### ಮರು ಟೆಂಡರ್ – ಕಂ – ಬಹಿರಂಗ ಹರಾಜು ಪ್ರಕಟಣೆ

**ಸಂಖ್ಯೆ:ಸಾಮಾನ್ಯ:ಜವ ಬೆ ಯಂತ್ರ : 22 : 2007–08, ದಿನಾಂಕ: 24ನೇ ಸೆಪ್ಟೆಂಬರ್ 2008**

**ವಿಷಯ:** ಕೇಂದ್ರ ಕಛೇರಿಯಲ್ಲಿರುವ ಅನುಪಯುಕ್ತ ಬೆರಳಚ್ಚು ಯಂತ್ರಗಳನ್ನು ಟೆಂಡರ್–ಕಂ–ಬಹಿರಂಗ ಹರಾಜು ಮೂಲಕ ವಿಲೇವಾರಿ ಮಾಡುವ ಕುರಿತು.

ಕೇಂದ್ರ ಕಛೇರಿಯಲ್ಲಿರುವ ಅನುಪಯುಕ್ತವಾಗಿರುವ ಒಟ್ಟು 31 ವಿವಿಧ ಮಾದರಿಯ ಕನ್ನಡ ಮತ್ತು ಇಂಗ್ಲೀಷ್ ಬೆರಳಚ್ಚು ಯಂತ್ರಗಳನ್ನು ಹಾಲಿ ಇರುವ ಸ್ಥಿತಿಯಲ್ಲಿ ದಿನಾಂಕ 21.11.2008 ರಂದು ಅಪರಾಹ್ನ 3.30 ಗಂಟೆಗೆ ಕೃಷಿ ಆಯುಕ್ತರ

ಕಛೇರಿ, ಶೇಷಾದ್ರಿ ರಸ್ತೆ, ಬೆಂಗಳೂರು–1 ಇವರ ಕಛೇರಿಯ ಕೇಂದ್ರ ಉಗ್ರಾಣದಲ್ಲಿ ಮರು ಟೆಂಡರ್–ಕಂ–ಬಹಿರಂಗ ಹರಾಜು ಮೂಲಕ ವಿಲೇವಾರಿ ಮಾಡಲಾಗುವುದು.

ಆಸಕ್ತಿಯುಳ್ಳವರು ಈ ಹರಾಜು ಪ್ರಕ್ರಿಯೆಯಲ್ಲಿ ಭಾಗವಹಿಸಬಹುದು ಹಾಗೂ ಹೆಚ್ಚಿನ ವಿವರಗಳಿಗೆ / ಷರತ್ತುಗಳಿಗೆ ಕೇಂದ್ರ ಕಛೇರಿಯ ಸೂಚನಾ ಫಲಕ ಅವಲೋಕಿಸುವುದು ಅಥವಾ ಈ ಕಛೇರಿಯ ಸಾಮಾನ್ಯ ವಿಭಾಗದ ಅಧೀಕ್ಷಕರನ್ನು ಸಂಪರ್ಕಿಸುವುದು.

ತಮ್ಮ ವಿಶ್ವಾಸಿ,

ಪಿ.ಆರ್. 518 ಕೃಷಿ ನಿರ್ದೇಶಕರ ಪರವಾಗಿ

**ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ**

**ಕಾರ್ಯನಿರ್ವಾಹಕ ಇಂಜಿನಿಯರ್ ಕಛೇರಿ, ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ, ಮಂಗಳೂರು ವಿಭಾಗ, ಮಂಗಳೂರು**

**ಇ – ಟೆಂಡರ್ ಪ್ರಕಟಣೆ (ದ್ವಿ ಲಕೋಟೆ ಪದ್ಧತಿ)**

**ಕೆಪಿಡಬ್ಲ್ಯುಡಿ:2008–09:ಎಇ–1:ವರ್ಕ್–ಇಡೆಂಟ್ 4, ದಿನಾಂಕ: 25ನೇ ಸೆಪ್ಟೆಂಬರ್ 2008**

ಕೆ.ಆರ್.ಡಿ.ಸಿ.ಎಲ್ ಯೋಜನೆಯಡಿ ಪುತ್ತೂರು ತಾಲ್ಲೂಕಿನ ಸುಬ್ರಹ್ಮಣ್ಯ – ಉಡುಪಿ ರಾಜ್ಯಹೆದ್ದಾರಿ ನಂಬ್ರ 37ರ ಕಿ.ಮೀ. 5.50 ರಿಂದ 19.60 ಕಿ.ಮೀ ವರೆಗೆ ರಸ್ತೆ ಅಭಿವೃದ್ಧಿ (ಉದ್ದ 14.10 ಕಿ.ಮೀ) ಕಾಮಗಾರಿಗೆ ಸಂಬಂಧಿಸಿದಂತೆ ಇ ಟೆಂಡರನ್ನು ಕರ್ನಾಟಕ ರಾಜ್ಯಪಾಲರ ಪರವಾಗಿ ಕರ್ನಾಟಕ ಸರ್ಕಾರದ ಇ–ಪ್ರೊಕ್ಯೂರ್‌ಮೆಂಟ್ ಪೋರ್ಟಲ್ ಇದರಲ್ಲಿ ಪ್ರಕಟಿಸಲಾಗಿದೆ. ದಯಮಾಡಿ ಅಂತರ್‌ಜಾಲದ ವೆಬ್‌ಸೈಟ್ https://eproc.karnataka.gov.in ನೋಡಿ ಟೆಂಡರ್ ದಾಖಲೆಗಳನ್ನು ಪಡೆಯಬಹುದಾಗಿ ಕೋರಲಾಗಿದೆ. ಟೆಂಡರು ಸ್ವೀಕರಿಸುವ ಕೊನೆಯ ದಿನಾಂಕವನ್ನು 10.11.2008 ರಂದು ಅಪರಾಹ್ನ 4.00 ಗಂಟೆಯವರೆಗೆ, ತಾಂತ್ರಿಕ ಬಿಡ್ಡನ್ನು ತೆರೆಯುವ ದಿನಾಂಕ: 14.11.2008 ಪೂರ್ವಾಹ್ನ 11.00 ಗಂಟೆಗೆ ಮತ್ತು ಆರ್ಥಿಕ ಬಿಡ್ಡನ್ನು ತೆರೆಯುವ ದಿನಾಂಕ:22.11.2008 ಪೂರ್ವಾಹ್ನ 11.00 ಗಂಟೆಗೆ ಎಂದು ನಿಗದಿಪಡಿಸಲಾಗಿದೆ. ಇ–ಪ್ರೊಕ್ಯೂರ್‌ಮೆಂಟ್ ಬಗ್ಗೆ ಹೆಚ್ಚಿನ ಮಾಹಿತಿಗಳನ್ನು Govt help desk ಮೂಲಕ ಸಹ ತಿಳಿದುಕೊಳ್ಳಬಹುದು. ದೂರವಾಣಿ ಕರೆ:080 22485867.

ಕಾರ್ಯನಿರ್ವಾಹಕ ಇಂಜಿನಿಯರ್, ಪರವಾಗಿ

ಪಿ.ಆರ್. 519 ಲೋಕೋಪಯೋಗಿ, ಬಂದರು ಮತ್ತು ಒಳನಾಡು

ಜಲಸಾರಿಗೆ ಇಲಾಖೆ, ಮಂಗಳೂರು ವಿಭಾಗ, ಮಂಗಳೂರು.

**FORM - IV**

**(See Rule 12)**

**NOTICE**

It is hereby notified that the undersigned has changed his/her name from **RAJARAM RAMU SAMAGAR** to **RAJARAM RAMU KHAIRAMODE**

P.D. 150 **RAJARAM RAMU SAMAGAR**

**FORM - IV**

**(See Rule 12)**

**NOTICE**

It is hereby notified that the undersigned has changed his/her name from **JAYAPPA FAKKIRAPPA. HARIJAN.** to **JAYAPPA FAKKIRAPPA. SOMASAGAR**

P.D. 151 **JAYAPPA FAKKIRAPPA. HARIJAN.**

**FORM - IV**

**(See Rule 12)**

**NOTICE**

It is hereby notified that the undersigned has changed his/her name from **CHANDRAKANTH** to **D. KANTH**

P.D. 152 **CHANDRAKANTH**